CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೮, ೨೦೦೩ (ಭಾದ್ರಪದ ೨೭ ಶಕ ವರ್ಷ ೧೯೨೫) | ಸಂಚಿಕೆ ೩೮ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಗೃಹರಕ್ಷಕ ಹಾಗೂ ಪೌರರಕ್ಷಣಾ ಇಲಾಖೆ,**

**ನಂ.1, ಅಣ್ಣಾಸ್ವಾಮಿ ಮೊದಲಿಯಾರ್ ರಸ್ತೆ, ಬೆಂಗಳೂರು -42**

**ಅಧಿಸೂಚನೆ ಸಂಖ್ಯೆ: ಎಡಿಯಂ (1) 18/ಸಿಜಿಜಿ/2001-02 ದಿನಾಂಕ: 20ನೇ ಆಗಸ್ಟ್ 2003**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ ಹಾಗೂ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002ರ ಅಡಿಯಲ್ಲಿ ಇಲಾಖೆಗೆ ಸಂಬಂಧಿಸಿದಂತೆ ವಿವಿಧ ಪ್ರಾಧಿಕಾರಗಳ ರಚನೆ ಹಾಗೂ ಚಟುವಟಿಕೆಗಳ ಪ್ರಕಟಣೆಗಳು.

ಕರ್ನಾಟಕ ಮಾಹಿತಿ ಪಡೆಯಲು, ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002ರ ಅನ್ವಯ ಗೃಹರಕ್ಷಕ ಹಾಗೂ ಪೌರರಕ್ಷಣಾ ಇಲಾಖೆಯ ಸಾರ್ವಜನಿಕ ಸಕ್ಷಮ ಮತ್ತು ಅಪೀಲು ಪ್ರಾಧಿಕಾರಗಳು ಈ ಕೆಳಗಿನಂತಿವೆ.

| ಸಾರ್ವಜನಿಕ ಪ್ರಾಧಿಕಾರ | ಸಕ್ಷಮ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರ |
|---|---|---|
| 1 | 2 | 3 |
| **ಜಿಲ್ಲಾ ಮಟ್ಟದಲ್ಲಿ:** ಸಮಾದೇಷ್ಟರು, ಗೃಹರಕ್ಷಕದಳದ ಕಚೇರಿ, ಬೆಂಗಳೂರು, ಬೆಳಗಾವಿ, ಬಳ್ಳಾರಿ, ಬೀದರ್, ಬಿಜಾಪುರ, ಚಿಕ್ಕಮಗಳೂರು, ಚಿತ್ರದುರ್ಗ ಧಾರವಾಡ, ಉತ್ತರ ಕನ್ನಡ, ಗುಲ್ಬರ್ಗಾ, ಹಾಸನ, ಕೊಡಗು, ಕೋಲಾರ, ಕೆ.ಜಿ.ಎಫ್, ಮಂಡ್ಯ, ಮೈಸೂರು, ರಾಯಚೂರು, ಶಿವಮೊಗ್ಗ, ತುಮಕೂರು, ದಕ್ಷಿಣ ಕನ್ನಡ, ಬಾಗಲಕೋಟೆ, ಚಾಮರಾಜನಗರ, ದಾವಣಗೆರೆ, ಗದಗ, ಕೊಪ್ಪಳ, ಉಡುಪಿ ಮತ್ತು ಹಾವೇರಿ. | ಐ.ಜಿ.ಪಿ. ಹಾಗೂ ಅಪರ ಮಹಾ ಸಮಾದೇಷ್ಟರು, ಗೃಹರಕ್ಷಕದಳ ಹಾಗೂ ಅಪರ ನಿರ್ದೇಶಕರು, ಪೌರರಕ್ಷಣೆ, ಕರ್ನಾಟಕ ರಾಜ್ಯ, ಬೆಂಗಳೂರು. **ಅಥವಾ** ಉಪ ಮಹಾ ಸಮಾದೇಷ್ಟರು ಗೃಹರಕ್ಷಕದಳ ಹಾಗೂ ಉಪ ನಿರ್ದೇಶಕರು, ಪೌರರಕ್ಷಣೆ, ಕರ್ನಾಟಕ ರಾಜ್ಯ, ಬೆಂಗಳೂರು. | ಆರಕ್ಷಕ ಮಹಾ ನಿರ್ದೇಶಕರು ಹಾಗೂ ಗೃಹರಕ್ಷಕದಳದ ಮಹಾ ಸಮಾದೇಷ್ಟರು ಮತ್ತು ನಿರ್ದೇಶಕರು ಪೌರರಕ್ಷಣೆ, ಕರ್ನಾಟಕ ರಾಜ್ಯ, ಬೆಂಗಳೂರು. |
| **ರಾಜ್ಯ ಮಟ್ಟದಲ್ಲಿ:** | | |
| 1. ಸಮಾದೇಷ್ಟರು, ಗೃಹರಕ್ಷಕದಳ ಮತ್ತು ಪೌರರಕ್ಷಣಾ ತರಬೇತಿ ಮಹಾ ವಿದ್ಯಾಲಯ, ಬೆಂಗಳೂರು. | ಅದೇ | ಅದೇ |

| | 1 | 2 | 3 |
|---|---|---|---|
| 2. | **ಗೃಹರಕ್ಷಕದಳ ಹಾಗೂ ಪೌರರಕ್ಷಣಾ ಕೇಂದ್ರ ಕಚೇರಿ, ಬೆಂಗಳೂರು**<br>ಉಪ ಮಹಾ ಸಮಾದೇಷ್ಟರು, ಗೃಹರಕ್ಷಕದಳ ಹಾಗೂ ಉಪ ನಿರ್ದೇಶಕರು, ಪೌರರಕ್ಷಣೆ ಕರ್ನಾಟಕ ರಾಜ್ಯ, ಬೆಂಗಳೂರು | ಐ.ಜಿ.ಪಿ. ಹಾಗೂ ಅಪರ ಮಹಾ ಸಮಾದೇಷ್ಟರು ಗೃಹರಕ್ಷಕದಳ ಹಾಗೂ ಅಪರ ನಿರ್ದೇಶಕರು, ಪೌರರಕ್ಷಣೆ ಕರ್ನಾಟಕ ರಾಜ್ಯ, ಬೆಂಗಳೂರು. | ಆರಕ್ಷಕ ಮಹಾ ನಿರ್ದೇಶಕರು ಹಾಗೂ ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಮತ್ತು ನಿರ್ದೇಶಕರು, ಪೌರರಕ್ಷಣೆ, ಕರ್ನಾಟಕ ರಾಜ್ಯ, ಬೆಂಗಳೂರು. |

**ಇಲಾಖೆಯ ಕಾರ್ಯಚಟುವಟಿಕೆಗಳು:**

ಗೃಹರಕ್ಷಕ ಹಾಗೂ ಪೌರರಕ್ಷಣಾ ಇಲಾಖೆಯು ಸ್ವಯಂ ಸೇವಕರುಗಳಿಂದ ಕೂಡಿರುವ ಸಂಸ್ಥೆಯಾಗಿರುತ್ತದೆ. ಕಾನೂನು ಮತ್ತು ಸುವ್ಯವಸ್ಥೆಯ ರಕ್ಷಣೆಯಲ್ಲಿ ಪೊಲೀಸ್ ಇಲಾಖೆಗೆ ಪೂರಕವಾಗಿ ಸೇವೆ ನೀಡುವುದು ಹಾಗೂ ಯಾವುದೇ ಆಕಸ್ಮಿಕಗಳಲ್ಲಿ ಜನ ಸಮುದಾಯದ ರಕ್ಷಣೆಯಲ್ಲಿ ತೊಡಗುವುದು ಈ ಇಲಾಖೆಯ ಮುಖ್ಯ ಧ್ಯೇಯವಾಗಿರುತ್ತದೆ. ಸ್ವಯಂ ಸೇವಕರುಗಳನ್ನು ಈ ದಳದಲ್ಲಿ ಭರ್ತಿ ಮಾಡಿಕೊಳ್ಳುವುದು ಹಾಗೂ ಅವರಿಗೆ ವಿವಿಧ ವೃತ್ತಿಪರ ವಿಷಯಗಳಲ್ಲಿ ತರಬೇತಿ ನೀಡುವುದು ಮತ್ತು ಅಗತ್ಯ ಬಿದ್ದಾಗ ಗೃಹರಕ್ಷಕರನ್ನು ಕರ್ತವ್ಯದಲ್ಲಿ ನಿಯೋಜಿಸುವುದು ಈ ಇಲಾಖೆಯ ಪ್ರಮುಖ ಕರ್ತವ್ಯವಾಗಿರುತ್ತದೆ.

**ನಿರ್ವಹಿಸಲಾಗಿರುವ ವಿಷಯಗಳು:**

1) ಗೃಹರಕ್ಷಕ ದಳದ ಸಮಾದೇಷ್ಟರುಗಳ ನೇಮಕಾತಿ
2) ವಾರ್ಷಿಕ ವರದಿ ಹಾಗೂ ವಾರ್ಷಿಕ ಆಡಳಿತ ವರದಿ
3) ಜಿಲ್ಲೆಗಳ ವಾಸ್ತವಿಕ ಸಂಖ್ಯಾಬಲ ಪಟ್ಟಿ
4) ಗೃಹರಕ್ಷಕರ ಕರ್ತವ್ಯ ನಿಯೋಜನಾ ವಿವರಣಾ ಪಟ್ಟಿ
5) ಗೃಹರಕ್ಷಕರ ಕಾಯ್ದೆ ಹಾಗೂ ನಿಯಮಗಳು
6) ಬಜೆಟ್ ಭಾಷಣದ ವರದಿಗಳು
7) ಆರ್ಥಿಕ ಸಚಿವರು ಮಂಡಿಸಲಿರುವ ಭಾಷಣಕ್ಕೆ ವರದಿ
8) ಸಾರ್ವಜನಿಕ ದೂರು ವಿಭಾಗಕ್ಕೆ ಕಳುಹಿಸಲಿರುವ ವರದಿ
9) ವಾಹನಗಳ ಖರೀದಿ ಬಗ್ಗೆ ಹಾಗೂ ಹಳೆ ವಾಹನಗಳ ಟೆಂಡರ್ ಹರಾಜು ಬಗ್ಗೆ ವರದಿ
10) ಸಮವಸ್ತ್ರಗಳ ಖರೀದಿ ಬಗ್ಗೆ ವೆಚ್ಚದ ವಿವರಣಾ ಪಟ್ಟಿ
11) ಗೃಹರಕ್ಷಕರಿಗೆ ನೀಡಲಾಗುತ್ತಿರುವ ಅನುಗ್ರಹ ಪೂರ್ವಕ ಸಲ್ಲಿಕೆ ಆದೇಶ ಸಂಖ್ಯೆ: 72
12) ಶ್ಲಾಘನೀಯ ಸೇವಾ ಪದಕ: ವಿಶಿಷ್ಟ ಸೇವಾ ಪದಕ ಹಾಗೂ ಗ್ಯಾಲಂಟ್ರಿ ಪದಕಗಳ ನೀಡಿಕೆ ಬಗ್ಗೆ ಮಾಹಿತಿ
13) ಕೋರ್ಟ್ ಪ್ರಕರಣಗಳ ಬಗ್ಗೆ ಮಾಹಿತಿ
14) ಗೃಹರಕ್ಷಕರ ಬಡ್ತಿ
15) ಅಖಿಲ ಭಾರತ ಮಟ್ಟದ ಹಾಗೂ ರಾಜ್ಯಮಟ್ಟದ ಕ್ರೀಡಾಕೂಟ
16) ಭತ್ಯೆಗಳ ಪರಿಷ್ಕರಣೆ
17) ದೂರು ಅರ್ಜಿಗಳು
18) ಗೃಹರಕ್ಷಕರುಗಳಿಗೆ ನೀಡಲಾಗುವ ತರಬೇತಿಗಳು
19) ಗೃಹರಕ್ಷಕರುಗಳಿಗೆ ನೀಡಲಾಗುತ್ತಿರುವ ಸೌಲಭ್ಯಗಳು
20) ಗೃಹರಕ್ಷಕ ದಿನಾಚರಣೆ
21) ಗೃಹರಕ್ಷಕ ಅಧಿಕಾರಿಗಳ ವಯೋಮಿತಿ ಸಡಿಲಿಕೆ
22) ಬಂದೂಕು ಉಡಾವಣಾ ತರಬೇತಿ.
23) ತಾಂತ್ರಿಕ ವೃತ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗೃಹರಕ್ಷಕರು
24) ಸಮಾದೇಷ್ಟರುಗಳ ವಾರ್ಷಿಕ ಸಮ್ಮೇಳನ
25) ಅಖಿಲ ಭಾರತ ದ್ವೈವಾರ್ಷಿಕ ಸಮ್ಮೇಳನ
26) ಘಟಕಗಳ ಪ್ರಾರಂಭ ಹಾಗೂ ಮುಚ್ಚುವಿಕೆ
27) ಗೃಹರಕ್ಷಕರು ನಿರ್ವಹಿಸುತ್ತಿರುವ ಕರ್ತವ್ಯಗಳ ವಿವರಗಳು
28) ನಗದು ಪುರಸ್ಕಾರ
29) ಗೃಹರಕ್ಷಕರ ಸದಸ್ಯತ್ವದ ಸಮಾಲೋಪನೆ
30) ಕೇಂದ್ರ ಗೃಹ ಮಂತ್ರಾಲಯ ಭಾರತ ಸರ್ಕಾರ ಇವರ ಪತ್ರಗಳಿಗೆ ಮಾಹಿತಿ ಒದಗಿಸುವ ಬಗ್ಗೆ.

ಎಂ. ಡಿ. ಸಿಂಹ

ಪಿ.ಆರ್.1017

ಆರಕ್ಷಕ ಮಹಾ ನಿರ್ದೇಶಕರು,
ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಮತ್ತು
ನಿರ್ದೇಶಕರು, ಪೌರರಕ್ಷಣೆ.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,**

**ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು - 560 001**

**ಪ್ರಕಟಣೆ ಸಂಖ್ಯೆ: ಕರಾಆ:ಆಡಳಿತ:31:2003-2004, ದಿನಾಂಕ: 23ನೇ ಆಗಸ್ಟ್ 2003**

**ಬೆಂಗಳೂರು ಗ್ರಾಮಾಂತರ ಹಾಗೂ ಬೆಂಗಳೂರು ನಗರ ಒಂದನೇ ಅಪರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಮಹಿಳಾ ಸದಸ್ಯರ ಸ್ಥಾನಕ್ಕೆ ಅರ್ಜಿಯನ್ನು ಆಹ್ವಾನಿಸುವ ಬಗ್ಗೆ ಪ್ರಕಟಣೆ**

ಬೆಂಗಳೂರು ಗ್ರಾಮಾಂತರ ಹಾಗೂ ಬೆಂಗಳೂರು ನಗರ ಒಂದನೇ ಅಪರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಡಿಯಲ್ಲಿ ರಚಿತಗೊಂಡು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುವ ನ್ಯಾಯಿಕ ಸ್ವರೂಪದ ಕೆಲಸವನ್ನು ನಿರ್ವಹಿಸುತ್ತಿದ್ದು, ಸದರಿ ವೇದಿಕೆಯ ಮಹಿಳಾ ಸದಸ್ಯರ ಸ್ಥಾನಕ್ಕಾಗಿ ಕನಿಷ್ಠ 35 ವರ್ಷ ವಯಸ್ಸಾಗಿರುವವರು, ಅಂಗೀಕೃತ ವಿಶ್ವವಿದ್ಯಾಲಯದ ಪದವೀಧರರಾಗಿರುವವರು ಮತ್ತು ಸಾಮರ್ಥ್ಯ, ನೀತಿ ನಿಷ್ಠೆ ಮತ್ತು ಗಣ್ಯಸ್ಥಾನ (ಸ್ಥಾನಮಾನ) ಹೊಂದಿದ ಮತ್ತು ಅರ್ಥಶಾಸ್ತ್ರ, ಲೆಕ್ಕಪತ್ರ, ಕಾನೂನು, ವಾಣಿಜ್ಯ ಕೈಗಾರಿಕೆ, ಸಾರ್ವಜನಿಕ ಆಡಳಿತ ಅಥವಾ ಸಾರ್ವಜನಿಕ ವ್ಯವಹಾರ ಇವುಗಳಲ್ಲಿನ ಸಮಸ್ಯೆಗಳನ್ನು ಪರಿಹರಿಸುವ ಬಗ್ಗೆ ಕನಿಷ್ಠ 10 ವರ್ಷಗಳ ಅನುಭವವುಳ್ಳವರು ನಿಗದಿತ ಅರ್ಜಿ ನಮೂನೆಯಲ್ಲಿ, ಅರ್ಜಿಯನ್ನು ಸಂಪೂರ್ಣವಾಗಿ ಭರ್ತಿ ಮಾಡಿ ಅಗತ್ಯ ದಾಖಲೆಗಳ ಪ್ರತಿಗಳೊಂದಿಗೆ ದಿನಾಂಕ 30ನೇ ಸೆಪ್ಟೆಂಬರ್ 2003 ರಂದು ಸಂಜೆ 5 ಗಂಟೆಯೊಳಗಾಗಿ ಅಧ್ಯಕ್ಷರು, ಬೆಂಗಳೂರು ಗ್ರಾಮಾಂತರ ಹಾಗೂ ಬೆಂಗಳೂರು ನಗರ ಒಂದನೇ ಅಪರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಸ್ವಾತಿ ಕಾಂಪ್ಲೆಕ್ಸ್, ಫ್ಲಾಟ್ ಫಾರಂ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು 560 020 ಇಲ್ಲಿಗೆ ಸಲ್ಲಿಸುವುದು.

ಅರ್ಜಿ ನಮೂನೆಗಳ ಪ್ರತಿಯನ್ನು ಅರ್ಹ ಅರ್ಜಿದಾರರು ಉಚಿತವಾಗಿ ಮೇಲಿನ ವಿಳಾಸದಲ್ಲಿ ಪಡೆಯಬಹುದು.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,
**ಹೆಚ್. ಆರ್. ಶ್ರೀನಿವಾಸ್**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ
ಪರಿಹಾರ ಆಯೋಗ, ಬೆಂಗಳೂರು.

**............................................................ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರ/ ಸದಸ್ಯರ ನೇಮಕಾತಿಗೆ ಅರ್ಜಿ**

(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

| ಇತ್ತೀಚಿನ ಪಾಸ್‌ಪೋರ್ಟ್ ಸೈಜ್‌ನ ಭಾವಚಿತ್ರವನ್ನು ಲಗತ್ತಿಸಿ |
|---|

ಅ. ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ

ಆ. ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ

ಇ. ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ
(ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ)

| | | |
|---|---|---|
| 1. | ಅಭ್ಯರ್ಥಿಯ ಪೂರ್ಣ ಹೆಸರು | ............................................................................... (ಸರ್‌ನೇಮ್) (ಹೆಸರು) |
| 2. | ನೀವು ನಿಮ್ಮ ಹೆಸರನ್ನು ಯಾವಾಗಲಾದರು ಬದಲಾಯಿಸಿ ಕೊಂಡಿದ್ದೀರಾ? ಹಾಗಿದ್ದಲ್ಲಿ, ಅದಕ್ಕೆ ಕಾರಣಗಳೊಂದಿಗೆ, ಪೂರ್ಣ ವಿವರ ಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |

| | | |
|---|---|---|
| 3. | **ವಿಳಾಸಗಳು:**<br>ಅ. ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ)<br>ಆ. ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರ ಅಥವಾ ಯಾವುದೇ ವೃತ್ತಿಯಲ್ಲಿದ್ದೀರ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ ಮತ್ತು ಫ್ಯಾಕ್ಸ್ ಸಂಖ್ಯೆ) | (ಅ)<br>(ಆ) |
| 4. | ತಂದೆಯ ಅಥವಾ ಪತಿಯ:<br>(ಅ) ಪೂರ್ಣ ಹೆಸರು<br>(ಆ) ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ. (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು)<br>(ಇ) ವೃತ್ತಿ - ವಿಳಾಸ ಮತ್ತು ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | (ಅ)<br>(ಆ)<br>(ಇ) |
| 5. | ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ) ವಯಸ್ಸನ್ನು ಋಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ. | |
| 6. | (ಅ) ಜನ್ಮಸ್ಥಳ, ಜಿಲ್ಲೆ ಮತ್ತು ರಾಜ್ಯ.<br>(ಆ) ಪ್ರಸ್ತುತ ನೆಲೆಸಿರುವ ಜಿಲ್ಲೆ | (ಅ)<br>(ಆ) |
| 7. | (ಅ) ನಿಮ್ಮ ಮತ<br>(ಆ) ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ? ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು. ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು | (ಅ)<br>(ಆ) |

| | | | | |
|---|---|---|---|---|
| 8. | ಎಸ್.ಎಸ್.ಎಲ್.ಸಿ.ಯಿಂದ ಮೊದಲ್ಗೊಂಡು ವಿದ್ಯಾರ್ಹತೆ - ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ ಕಾಲೇಜಿನ ವಿವರಗಳೊಂದಿಗೆ. (ದೃಢೀಕರಿಸಿದ ಪದವಿ/ ಡಿಪ್ಲೊಮಾ ಪ್ರಮಾಣಪತ್ರಗಳ ಪ್ರತಿ ಲಗತ್ತಿಸುವುದು. | | | |
| | ಶಾಲೆ/ ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ ಪದವಿಯ ಹೆಸರು. |
| | | | | |

<table>
<tr><td>9.</td><td colspan="5">ನೀವು ಯಾವಾಗಲಾದರು ಉದ್ಯೋಗದಲ್ಲಿದ್ದಿದ್ದರೆ, ವಿವರ ಒದಗಿಸಿ.</td></tr>
<tr><td rowspan="2"></td><td rowspan="2">ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ.</td><td colspan="2">ಅವಧಿ</td><td rowspan="2">ಕಚೇರಿ/ಸಂಸ್ಥೆಯ ಪೂರ್ಣ ವಿಳಾಸ</td><td rowspan="2">ಉದ್ಯೋಗವನ್ನು ತ್ಯಜಿಸಲು ಕಾರಣಗಳು</td></tr>
<tr><td>ಇಂದ (ದಿನಾಂಕ)</td><td>ವರೆಗೆ (ದಿನಾಂಕ)</td></tr>
<tr><td></td><td></td><td></td><td></td><td></td><td></td></tr>
<tr><td>10</td><td>ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ, ಚಾರಿತ್ರ್ಯ ಪ್ರಮಾಣ ಪತ್ರಗಳನ್ನು ಮೂಲ ಪ್ರತಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ, ಈ ಅರ್ಜಿಗೆ ಸಹಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ 6 ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣಪತ್ರವಾಗಿ ರತಕ್ಕದ್ದು.</td><td colspan="4"></td></tr>
<tr><td>11</td><td>(ಅ) ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ ಜುಲ್ಮಾನೆ ಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ?<br>(ಆ) ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ?<br>(ಇ) ಮೇಲಿನ (ಅ) ಅಥವಾ/ಮತ್ತು (ಆ) ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ ಜುಲ್ಮಾನೆ, ಅಪರಾಧ ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು.</td><td colspan="4">(ಅ)<br>(ಆ)<br>(ಇ)</td></tr>
</table>

| | | |
|---|---|---|
| 12 | (ಅ) ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ತೆಗೆದು ಹಾಕಲಾಗಿದೆಯೇ (removed) /ಹೊರ ಹಾಕಲಾಗಿದೆಯೇ (terminated)/ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred)<br>(ಆ) ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು, ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಅ)<br>(ಆ) |
| 13 | ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ?<br>1) ವಯಸ್ಸನ್ನು ಋಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ.<br>2) ಹುದ್ದೆಗೆ ಬೇಕಾದ ವಿದ್ಯಾರ್ಹತೆ/ ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ ಸೆಕ್ಷನ್ 10/ 16ನ್ನು ನೋಡಿ). | |
| 14 | ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15 | ಅರ್ಜಿದಾರನ ಈಗಿನ ವಾರ್ಷಿಕ ವರಮಾನ ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |

| | | |
|---|---|---|
| 16 | ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ಅಥವಾ ಅನುಭವ/ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10/16ರನ್ನು ನೋಡಿ). | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

## ಅರ್ಜಿದಾರರಿಂದ ಘೋಷಣೆ

.................................................................................................................... ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ: 68/1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/* ರಾಜ್ಯ ಆಯೋಗದ *ಅಧ್ಯಕ್ಷ/ *ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/* ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/* ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

* 5. ನಾನು ವಕೀಲ ವೃತ್ತಿಯನ್ನು ................................................ ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/* ಸದಸ್ಯನಾಗಿ ಕಾರ್ಯನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

* ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ : ಅರ್ಜಿದಾರರ ಸಹಿ

ದಿನಾಂಕ:

## ಸಹಬಂಧ

## ಚಾರಿತ್ರ್ಯ ಪ್ರಮಾಣಪತ್ರ

ಶ್ರೀ ....................................................................................... ಇವರ ಮಗನಾದ/ ಮಗಳಾದ/ ಹೆಂಡತಿಯಾದ ಶ್ರೀ/ಶ್ರೀಮತಿ ..................................................................................... ........................................................................ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು, ಇವರು ನನಗೆ ಕಳೆದ ........................ ವರ್ಷ ಮತ್ತು .................... ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/1986)ರ ಕಲಂ 10/16ನ್ನು ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ/ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ಶ್ರೀಮತಿ ........................................................................................ (ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

ಸ್ಥಳ : ಸಹಿ ಮತ್ತು ಹೆಸರು; ಮನೆಯ ಪೂರ್ಣ ವಿಳಾಸ ಮತ್ತು ಕಚೇರಿ/

ದಿನಾಂಕ: ವೃತ್ತಿಯ ಪೂರ್ಣ ವಿಳಾಸ ಹಾಗೂ ಮನೆಯ ಮತ್ತು ಕಚೇರಿಯ ದೂರವಾಣಿ ಸಂಖ್ಯೆ:

ಪಿ.ಆರ್.1014

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ,**

**ಪ್ರಕಟಣೆ**

**ಸಂ:ಬಿಸಿಎಂ: ವಿನಿ-6: ವಿವ-1: 2003-04 ದಿನಾಂಕ: 18ನೇ ಆಗಸ್ಟ್ 2003**

**ವಿಷಯ :** ಅಲ್ಪಸಂಖ್ಯಾತರ ಇಲಾಖೆಯಲ್ಲಿ ವೃತ್ತಿ ತರಬೇತಿ ಕಾರ್ಯಕ್ರಮವನ್ನು ಜಾರಿಗೊಳಿಸುವ ಬಗ್ಗೆ.

**ಉಲ್ಲೇಖ :**
1. ದಿನಾಂಕ: 4.7.2001ರ ನಿರ್ದೇಶಕರ ಪತ್ರ ಸಂ: ಅಸಂನಿ:ವಿನಿ:ಸಿಆರ್ 103: 01-02 ದಿನಾಂಕ: 4.7.2001 ಮತ್ತು 9.7.2001.
2. ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ ಬೆಂಗಳೂರು ಇವರ ಪತ್ರ ಸಂ: ಅಸಂನಿ: ವೃತ್ತ: ಸಿಆರ್:50: 2003-04 ದಿನಾಂಕ: 17.6.2003

2003-04ನೇ ಸಾಲಿಗೆ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಯಿಂದ ಅಲ್ಪಸಂಖ್ಯಾತರ ನಿರುದ್ಯೋಗಿ ಯುವಕ:ಯುವತಿಯರಿಗೆ ವಿವಿಧ ವೃತ್ತಿ ತರಬೇತಿ ನೀಡುವ ಕಾರ್ಯಕ್ರಮವನ್ನು ಜಾರಿಗೊಳಿಸಲು ಉದ್ದೇಶಿಸಲಾಗಿದ್ದು, ಸದರಿ ಕಾರ್ಯಕ್ರಮದನ್ವಯ ಶಿವಮೊಗ್ಗ ಜಿಲ್ಲೆಗೆ ಸೇರಿದ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ (ಈ ಪ್ರಕಟಣೆಯೊಡನೆ ಲಗತ್ತಿಸಿದ ಅನುಬಂಧದಂತೆ) ತರಬೇತಿಯನ್ನು ನೀಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ನಿಬಂಧನೆಗಳು**

1. ಅಭ್ಯರ್ಥಿಗಳು ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಪಾರ್ಸಿ, ಬೌದ್ಧ ಸಿಖ್ ಮುಂತಾದ ಮತೀಯ ಅಲ್ಪಸಂಖ್ಯಾತರ ಜನಾಂಗಕ್ಕೆ ಸೇರಿರಬೇಕು.
2. ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ವಿದ್ಯಾರ್ಹತೆ ಎಸ್.ಎಸ್.ಎಲ್.ಸಿ. ಆಗಿರಬೇಕು (ಉತ್ತೀರ್ಣ ಅಥವಾ ಅನುತ್ತೀರ್ಣರಾಗಿರಬೇಕು).
3. ಅಭ್ಯರ್ಥಿಯ ವಯೋಮಿತಿ ಕನಿಷ್ಟ 18 ವರ್ಷ ಹಾಗೂ ಗರಿಷ್ಟ 40 ವರ್ಷಗಳೆಂದು ನಿಗದಿಪಡಿಸಿದೆ.
4. ಅಭ್ಯರ್ಥಿಗಳ ಪೋಷಕರ ವಾರ್ಷಿಕ ಆದಾಯ ರೂ. 48,000-00ಕ್ಕಿಂತ ಹೆಚ್ಚಿರಬಾರದು
5. ಸದರಿ ತರಬೇತಿಯನ್ನು ಒಂದಕ್ಕಿಂತ ಹೆಚ್ಚು ಬಾರಿ ಪಡೆಯಲು ಅವಕಾಶವಿರುವುದಿಲ್ಲ.
6. ಅಭ್ಯರ್ಥಿಗಳು ತರಬೇತಿಗಾಗಿ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸತಕ್ಕದ್ದು.
7. ಅರ್ಜಿ ಸಲ್ಲಿಸಲು ಕಡೆಯ ದಿನಾಂಕ: 8.9.2003

ಹೆಚ್ಚಿನ ವಿವರಗಳಿಗೆ ಜಿಲ್ಲಾ ಅಧಿಕಾರಿಗಳು ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆ, ಶಿವಮೊಗ್ಗ ಹಾಗೂ ಕಾರ್ಯನಿರ್ವಾಹಕ ಅಧಿಕಾರಿಗಳು ಎಲ್ಲಾ ತಾಲ್ಲೂಕು ಪಂಚಾಯತ್, ಶಿವಮೊಗ್ಗ ಜಿಲ್ಲೆ ಇಲ್ಲಿ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳನ್ನು ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದು.

ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

**ಅನುಬಂಧ**

| ವೃತ್ತಿ ತರಬೇತಿ ಕೋರ್ಸ್ ಕೋಡ್ ಮತ್ತು ಕೋರ್ಸಿನ ಹೆಸರು | ತರಬೇತಿ ನೀಡುವ ಸಂಸ್ಥೆಯ ಹೆಸರು | ಅಭ್ಯರ್ಥಿಗಳ ಸಂಖ್ಯೆ | ತರಬೇತಿ ಅವಧಿ | ತರಬೇತಿ ಶುಲ್ಕ ಕೋರ್ಸಿಗೆ | ಮಾಸಿಕ ಸ್ಟೈಫಂಡ್ |
|---|---|---|---|---|---|
| 1. ಎಡಿ-01 ಫ್ಯಾಷನ್ ಡಿಸೈನಿಂಗ್ | ಸರ್ಕಾರಿ ರೆಸಿಡೆನ್ಸಿಯಲ್ಲಿ ಮಹಿಳಾ ಪಾಲಿಟೆಕ್ನಿಕ್ ಶಿವಮೊಗ್ಗ | 10 | 6 ತಿಂಗಳು | 3000-00 | 500-00 |
| 2. ಇಸಿ-01 ಸರ್ವಿಸಿಂಗ್ ಎಲೆಕ್ಟ್ರಾನಿಕ್ಸ್ ಎಕ್ವಿಪ್‌ಮೆಂಟ್ | ಸರ್ಕಾರಿ ಪಾಲಿಟೆಕ್ನಿಕ್ ಸೊರಬ | 10 | 3 ತಿಂಗಳು | 3000-00 | 500-00 |
| 3. ಇಇ-04 ಎಲ್ಕ್ಟ್ರಿಕಲ್ ವೈರ್‌ಮನ್ ಟ್ರೈನಿಂಗ್ ಫಾರ್ ವೈರಿಂಗ್ ಲೈಸನ್ಸ್ | ಸರ್ಕಾರಿ ವಿ.ಐ.ಎಸ್.ಎಸ್.ಜೆ. ಪಾಲಿಟೆಕ್ನಿಕ್ ಭದ್ರಾವತಿ | 10 | 1 ತಿಂಗಳು | 1500-00 | 500-00 |

ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

ಪಿ.ಆರ್.1018

**PROCEEDINGS OF THE DEPUTY COMMISSIONER OF COMMERCIAL TAXES (ASSESSMENTS-31) FAST TRACK, CITY DVN-3, BANGALORE**

**Present: Sri. K. P. Basavaraja**

1. Name of the dealer and address : M/s. Pavan Pharma Associates, No. 25, 4th Main, 1st floor, Chamarajpet, Bangalore-560018
2. KST. No. 90500507
   CST. No. 90550500

**Subject :** Loss of Original copy of 'F' form bearing No. H. 462322 dated: 11.02.02.

It is brought to the notice of all those concerned that this office has issued 'F' form bearing No. H. 462322 to M/s. Pavan Pharma Associates, No.25, 4th Main, 1st floor, Chamarajpet, Bangalore-560018 Now that M/s. Pavan Pharma Associates, Bangalore, have reported that their principals M/s. Dr. Reddy's Laboratories Ltd. No. 7-1-27 Ameerpet, Hyderabad-5600016 India, have lost the said 'F' form bearing No. 462322 dated: 11.02.02 for Rs. 34,17,800-45 related to the stock transfer covered for the month of January 2002 issued by the said dealer.

**Order No. EST.CR.5/2003-04 Dated 30th July 2003 under CST Act 1956**

In view of the above, I Sri. K. P. Basavaraja, Deputy Commissioner of Commercial Taxes (Assessments-31) Fast Track, Bangalore, declare that the said 'F' form No. 462322 dated: 11.02.02 will not have any value as the undersinged has declared the said form as obsolete. If anybody finds the said 'F' form may surrender the same to the DCCT (Assts. 31) Fast Track, Bangalore, and the details are as follows:

**FORMAT**

| | | | |
|---|---|---|---|
| 1. | Assessing authority | : | Deputy Commissioner of Commrl. Taxes (Assts.31) Fast Track, City Dvn-3, Gandhinagar, Bangalore-9 |
| 2. | Description of form | : | 'F' form declaration |
| 3. | Machine Sl. No. of lost 'F' form | : | H 462322 |
| 4. | Dealer to whom the form issued | : | M/s. Pavan Pharma Associates No. 25, 4th Main, 1st floor, Chamarajpet, Bangalore-560018. |
| 5. | KST & CST Number | : | 90500507/90550500 |
| 6. | Date of report of loss received in this office of the assessing authority | : | 11.03.2003 |
| 7. | How lost/ theft, destruction in transit | : | Lost in transit |

Deputy Commissioner of Commercial Taxes,
(Assts-31) Fast Track Bangalore.

**DEPUTY COMMISSIONER OF COMMERCIAL TAXES (ASSTs. 31) FAST TRACK, VTK BUILDING, BANGALORE.**

| Number (including code No.) declaraction form/s lost destroyed or stolen | Name & address of the dealer to whom declaration form/s is/are issued by the Dept. with date of issue | Registration certificate No. of the dealer under KST/CST Act 1957 | The address of the dealer to whom the declaration is/ are sent | Date of issue of form/by the dealer | whether lost/ destroyed or stolen | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| F form No. H 462322 | M/s. Pavan Pharma Associates No. 25, 4th Main, 1st Floor, Chamarajpet, Bangalore-560018. | KST 90500507 CST 90550500 | M/s. Dr. Reddys Laboratories No. 7-1-27 Ameerpet, Hyderabad 500016 | 11-02-02 | Lost | |

Deputy Commissioner of Commercial Taxes,
PR-1019 (Assts-31) Fast Track Bangalore.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.**

**ಇತರೇ ದಾವಾ ನಂ.9: 02-03**

| ಅರ್ಜಿದಾರರು | ವಿರುದ್ಧ | ಎದುರು ಅರ್ಜಿದಾರರು |
|---|---|---|
| ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಅಂತರಗಂಗೆ, ಭದ್ರಾವತಿ ತಾಲ್ಲೂಕು ಇವರ ಪರವಾಗಿ ವ್ಯವಸ್ಥಾಪಕರು. | | 1. ಕೆ. ವಿ. ನಾಗರಾಜ್ ಬಿನ್ ಬೋರಯ್ಯ, ಮಾರಾಟ ಗುಮಾಸ್ತರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಅಂತರಗಂಗೆ, ಭದ್ರಾವತಿ ತಾಲ್ಲೂಕು |

ಖಾಯಂ ವಿಳಾಸ
ಅಂತರಗಂಗೆ ಕ್ಯಾಂಪ್ (ಅಂಚೆ),
ಭದ್ರಾವತಿ ತಾಲ್ಲೂಕು.

2. ಮರಿಗೌಡ ಬಿನ್ ಕರೀಗೌಡ,
ಅಂತರಗಂಗೆ ಅಂಚೆ, ಭದ್ರಾವತಿ ತಾಲ್ಲೂಕು.

3. ಡಿ. ಕೆ. ಗಂಗಣ್ಣ
ಬಿನ್. ಡಿ. ಟಿ. ಕೃಷ್ಣಪ್ಪ, ರತ್ನಪುರ,
ಅಂತರಗಂಗೆ ಅಂಚೆ, ಭದ್ರಾವತಿ ತಾಲ್ಲೂಕು.

**(ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಪೂರ್ವ ಜಪ್ತು ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಸಂಘವು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 1998-99, 1999-2000 ಮತ್ತು 2000-01ನೇ ಸಾಲಿನ ಲೆಕ್ಕಪರಿಶೋಧನೆ ವರದಿಯಂತೆ ರೂ. 5920-20 ಗಳ ದುರುಪಯೋಗದ ವಸೂಲಿ ಬಗ್ಗೆ 1ನೇ ಎದುರಿಗಳ ಮೇಲೆ ದಾವಾ ದಾಖಲು ಮಾಡಿದ್ದು ಈ ಸಂಬಂಧವಾಗಿ ದಿನಾಂಕ: 12.8.2003 ರಂದು ನಡೆದ ವಿಚಾರಣೆ ದಿನಾಂಕದಂದು ಮೆಮೋ ಒಂದನ್ನು ನೀಡಿ, ಎದುರಿ ನಂ 1 ರವರ ಹೆಸರಿನಲ್ಲಿ ಸ್ಥಿರಾಸ್ತಿ ಇಲ್ಲದ ಕಾರಣ ಸದರಿಯವರಿಗೆ ಕೆಲಸಕ್ಕೆ ಸೇರುವ ಸಂದರ್ಭದಲ್ಲಿ ಜಾಮೀನುದಾರರಾಗಿರುವ 2ನೇ ಎದುರಿಯವರಿಗೆ ಸಂಬಂಧಿಸಿದ ಸ್ಥಿರಾಸ್ತಿಗಳನ್ನು ಕಲಂ 103 ರಡಿಯಲ್ಲಿ ಜಪ್ತು ಆಜ್ಞೆ ಹೊರಡಿಸಲು ಕೋರಿರುತ್ತಾರೆ. ಅರ್ಜಿದಾರರು ವ್ಯಾಜ್ಯದಲ್ಲಿನ ಕ್ಲೇಮ್ ಮೊತ್ತ ಹೆಚ್ಚಿನ ಮೊತ್ತವಾಗಿದ್ದು, ಇದಕ್ಕೆ ತನ್ನದಾದ ಮೌಲ್ಯದ ಆಸ್ತಿಯನ್ನು ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸುವುದು ಸೂಕ್ತವೆಂದು ಎದುರಿ ನಂ.2 ರವರ ಆಸ್ತಿಯನ್ನು ಈ ದಾವೆಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಸಹ ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತುಪೂರ್ವಕ ಜಪ್ತು ಆಜ್ಞೆಯನ್ನು ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ: ಸನಿತಿ 24: ಎಬಿಎನ್: ಕಲಂ 103: 02-03 ದಿನಾಂಕ: 25ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಪ್ರಕಾಶ್‌ರಾವ್, ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರಾದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್)ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಈ ದಾವೆಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ, ಎದುರು ಅರ್ಜಿದಾರರುಗಳು ತಮ್ಮ ಆಸ್ತಿಯನ್ನು ಷರತ್ತು ಪೂರ್ವಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ)ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀದಿ ಅಥವಾ ಚಲನ್ನಿನ ಪ್ರತಿಯನ್ನು ದಿನಾಂಕ: 22.9.2003ರ ಒಳಗೆ ಕೆಳ ಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದು ಎಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವಕ ಆದೇಶಕ್ಕೆ ಒಳಗಾದ ಸ್ವತ್ತುಗಳು**

**ಅನುಸೂಚಿ: ಷೆಡ್ಯೂಲ್**

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ: ಸರ್ವೆನಂ. | ವಿಸ್ತೀರ್ಣ | ತರಹ |
|---|---|---|---|---|---|
| 1. | ಮರಿಗೌಡ ಬಿನ್ ಕರಿಗೌಡ | ಭದ್ರಾವತಿ ತಾಲ್ಲೂಕು, ಕೂಡ್ಲಿಗೆರೆ ಹೋಬಳಿ, ಅಂತರಗಂಗೆ ಗ್ರಾಮ. | ಖಾತೆ ನಂ.55 ಆರ್‌ಆರ್ 852 ಎಂಆರ್ 56: 92-93 ಸರ್ವೆ ನಂ.27 | 0.20 ಗುಂಟೆ | ಖುಷ್ಕಿ |
| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ: ಸರ್ವೆನಂ. | ವಿಸ್ತೀರ್ಣ | ತರಹ |
| 1. | ಮರಿಗೌಡ ಬಿನ್ ಕರಿಗೌಡ | ಭದ್ರಾವತಿ ತಾಲ್ಲೂಕು, ಕೂಡ್ಲಿಗೆರೆ ಹೋಬಳಿ, ಬಿಸಿಲಮನೆ ಗ್ರಾಮ. | ಖಾತೆ ನಂ.8 ಎಆರ್ 7:98-99 ಸರ್ವೆ ನಂ.2 | 0.20 ಗುಂಟೆ | |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ಈ ದಿನ ದಿನಾಂಕ: 25.8.2003 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ,
ಶಿವಮೊಗ್ಗ.

ಪಿ.ಆರ್.1015

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವಿಜಾಪೂರ ಪ್ರಾದೇಶಿಕ ವಿಭಾಗ, ವಿಜಾಪೂರ ಇವರ ನ್ಯಾಯಾಲಯದಲ್ಲಿ**

**ವಾಹನ ಮುಟ್ಟುಗೋಲು ಆದೇಶ**

**ಸಂಖ್ಯೆ: ಎ2:ಸ್ಯಾಂಡಲ್:191: 2001-02 ವಿಜಾಪೂರ, ದಿನಾಂಕ: 25ನೇ ಆಗಸ್ಟ್ 2003.**

**ಫಿರ್ಯಾದುದಾರರು:** ಪಿ. ಎಸ್. ಐ. ಗ್ರಾಮೀಣ ಪೊಲೀಸ್ ಠಾಣೆ ವಿಜಾಪೂರ.

**ಆರೋಪಿಗಳು :**
1. ಶ್ರೀ ಶಿವರಾಮ ಸಂಜು ಚವ್ಹಾಣ ಸಾ: ತುಮದಡ್ಡಿ ಎಲ್.ಟಿ.
2. ಶ್ರೀ ಮುದಕಣ್ಣ. ಅಯ್ಯಣ್ಣ ಚಿಂಚೋಳ್ಳಿ ಸಾ: ಸೆಳ್ಳಗಿ ತಾ: ಮುದ್ದೇಬಿಹಾಳ ಜಿ: ವಿಜಾಪೂರ.
3. ಶ್ರೀ ರಾಜಶೇಖರ ಮಲ್ಲನಗೌಡ ಪಾಟೀಲ ಸಾ: ಹೊಸಹಳ್ಳಿ ತಾ: ಮುದ್ದೇಬಿಹಾಳ ಜಿ: ವಿಜಾಪೂರ.

**ಬಾಧ್ಯತೆದಾರರು :**
1. ಶ್ರೀ ಮಲ್ಲನಗೌಡ ಹಣಮಂತರಾಯ ಪಾಟೀಲ ಸಾ: ಹೊಸಹಳ್ಳಿ ತಾ: ಮುದ್ದೇಬಿಹಾಳ ಜಿ: ವಿಜಾಪೂರ
2. ಶ್ರೀ ಲಾಲಸಾಬ ಸುಲ್ತಾನಸಾಬ. ಮಕಾನದಾರ ಮನೆ ನಂ.1590 ಪೀರನವಾಡಿ ಗಲ್ಲಿ, ಸಿಂಧಿಕುರಬೆಟ್ಟ, ತಾ: ಗೋಕಾಕ ಬಿ: ಬೆಳಗಾವಿ.

**ಪ್ರಸ್ತಾವನೆ:**

ದಿನಾಂಕ: 13.8.2001 ರಂದು ಸಿ.ಪಿ.ಆಯ್. ಗ್ರಾಮೀಣ ವೃತ್ತ, ವಿಜಾಪೂರ ಇವರು ಪಿ.ಎಸ್. ಆಯ್. ಗ್ರಾಮೀಣ ಪೊಲೀಸ್ ಠಾಣೆ, ವಿಜಾಪೂರ ಇವರಿಗೆ ನೀಡಿದ ಸೂಕ್ತ ಸೂಚನೆ, ನಿರ್ದೇಶನಗಳ ಮೇರೆಗೆ ಪಿ.ಎಸ್.ಆಯ್ ಗ್ರಾಮೀಣ ಪೊಲೀಸ್ ಠಾಣೆ, ವಿಜಾಪೂರ ಇವರು ತಮ್ಮ ಸಿಬ್ಬಂದಿ ಜನರೊಂದಿಗೆ ಅರಕೇರಿ ತಾಂಡಾ ನಂ.2 ರ ಹತ್ತಿರ ಕಾಯುತ್ತಲಿರುವಾಗ ಮಧ್ಯಾಹ್ನ 12 ಘಂಟೆಯ ಹೊತ್ತಿಗೆ ವಿಜಾಪೂರ ಕಡೆಯಿಂದ ಬರುತ್ತಿದ್ದ ಟೆಂಪೋ ಟ್ರ್ಯಾಕ್ಸ ನೋಂದಣಿ ಸಂಖ್ಯೆ ಕೆಎ 23 ಎಂ 12833 ನಾಮಫಲಕವನ್ನು ಹೊಂದಿದ ಬಿಳಿ ಬಣ್ಣದ ವಾಹನವನ್ನು ತಡೆದು ಪರಿಶೀಲಿಸಲಾಗಿ, ಅನಧಿಕೃತವಾಗಿ ಸಾಗಿಸುತ್ತಿದ್ದ ಸುಮಾರು 49 ಕೆ.ಜಿ.ಯಷ್ಟು ಶ್ರೀಗಂಧವು 40 (ಹಸಿ) ತುಂಡುಗಳು, 2 ಗೋಣಿ ಚೀಲಗಳಲ್ಲಿ ಕಂಡು ಬಂದಿದ್ದು, ಸದರಿ ಶ್ರೀಗಂಧವನ್ನು ಅಕ್ರಮ ಕಳ್ಳ ಸಾಗಾಣಿಕೆ ಮಾಡಲು ತೊಡಗಿಸಿದ್ದ ಟೆಂಪೋ ಟ್ರ್ಯಾಕ್ಸ ವಾಹನ ಸಂ. ಕೆಎ 23 ಎಂ-2833 ನೇದ್ದನ್ನು ಶ್ರೀಗಂಧ, ಸಮೇತ ಜಪ್ತ ಮಾಡಿ, ಪಂಚರ ಸಮಕ್ಷಮ ಮಹಜರು ಜರುಗಿಸಿ ಕ್ರೈಮ್ ಸಂಖ್ಯೆ: 191: 2001ರ ಮೇರೆಗೆ ಪಿ.ಎಸ್.ಆಯ್. ವಿಜಾಪೂರ ರೂರಲ್ ಪಿ.ಎಸ್.ಆಯ್. ಇವರು ಗುನ್ನಾ ಪ್ರಕರಣವನ್ನು ದಾಖಲಿಸಿರುತ್ತಾರೆ. ಹಾಗೂ ಅನುಕ್ರಮ ಸಂ.39 ಮತ್ತು 40 ನೆಯ ಎರಡು ಶ್ರೀಗಂಧದ ಹಸಿ ತುಂಡುಗಳನ್ನು ಹೊರತುಪಡಿಸಿ ಅಂದಾಜು ತೂಕ 1.75 ಕೆ.ಜಿ.ಇದನ್ನು ಸ್ಯಾಂಪಲ್‌ಗಾಗಿ ಉಳಿಸಿಕೊಂಡು ಉಳಿದ 38 (ಹಸಿ) ಶ್ರೀಗಂಧದ ತುಂಡುಗಳನ್ನು ಹಾಗೂ ಜಪ್ತಾದ ವಾಹನ ಕೆಎ 23 ಎಂ-2833 ಟೆಂಪೋ ಟ್ರ್ಯಾಕ್ಸ್ ಇದನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ನಿಯಮಾವಳಿಗಳ ಮೇರೆಗೆ ಸೂಕ್ತ ಕ್ರಮ ಜರುಗಿಸುವ ಕುರಿತು, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಪ್ರಾದೇಶಿಕ ವಿಭಾಗ, ವಿಜಾಪೂರ ಇವರಲ್ಲಿ ಹಾಜರುಪಡಿಸಿರುತ್ತಾರೆ.

2) ವಾಹನದ ಆರ್. ಸಿ. ಬುಕ್ ನಂ 392470 ಪರಿಶೀಲಿಸಲಾಗಿ ಸದರಿ ಟೆಂಪೋ ಟ್ರ್ಯಾಕ್ಸ್ ವಾಹನ ಕೆಎ 23 ಎಂ-2833 ಇದರ ಮಾಲೀಕತ್ವವು ದಿನಾಂಕ: 17.8.2001 ರಂದು ಶ್ರೀ ಮಲ್ಲನಗೌಡ ಹಣಮಂತರಾಯ ಪಾಟೀಲ ಸಾ: ಬೆಳಗಾವಿ ಇವರಿಗೆ ಗುನ್ಹೆ ಪ್ರಕರಣ ದಾಖಲಾದ ದಿನದ ನಂತರ ವರ್ಗಾವಣೆ ಮಾಡಲ್ಪಟ್ಟಿರುವುದಾಗಿ ಕಂಡು ಬಂದಿರುತ್ತದೆ. ಹಾಗೂ ಸದರಿಯವರು ದಿನಾಂಕ: 6.12.2001 ರಂದು ನ್ಯಾಯವಾದಿಗಳ ಮೂಲಕ ಅರ್ಜಿ ಸಲ್ಲಿಸಿ ಸದರಿ ವಾಹನ ಸಂ. ಕೆಎ 23 ಎಂ-2833 ನ್ನು ಮಾಲೀಕರ ಮಧ್ಯಂತರ ತಾಬಾಕ್ಕೆ ಬಿಡುಗಡೆಗೊಳಿಸಲು ವಿನಂತಿಸಿದ್ದು ಅದೆ. ಅದರಂತೆ ವಾಹನದ ಮಾಲೀಕರಾದ ಶ್ರೀ ಮಲ್ಲನಗೌಡ ಹ. ಪಾಟೀಲ ಇವರು ಸಧ್ಯ ಮುದ್ದೇಬಿಹಾಳದಲ್ಲಿ ವಾಸಿಸುತ್ತಿರುವುದರಿಂದ ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 29.1.2002 ರಂದು ನೀಡಿದ ನೋಟೀಸಿನ ಅನುಸಾರ ಸದರಿಯವರು ದಿನಾಂಕ: 6.2.2002 ರಂದು ನ್ಯಾಯ ಪ್ರಾಧಿಕಾರದ ಮುಂದೆ ಹಾಜರಾಗಿರುತ್ತಾರೆ. ಹಾಗೂ ವಾಹನ ಬಿಡುಗಡೆ ಕುರಿತ ಬೇಡಿಕೆಯನ್ನು ಸಹಾಯಕ ಅಭಿಯೋಗ ನಿರ್ದೇಶಕರು, ವಿಜಾಪೂರ ಇವರು ನೀಡಿದ ಟಿಪ್ಪಣಿಗಳೊಂದಿಗೆ ಪರಿಶೀಲಿಸಿ, ವಿಚಾರಣಾ ವೇಳೆಯಲ್ಲಿ ಉಪಸ್ಥಿತರಿದ್ದ ಸಹಾಯಕ ಅಭಿಯೋಗ ನಿರ್ದೇಶಕರು, ವಿಜಾಪೂರ, ಹಾಜರಿದ್ದ ನ್ಯಾಯವಾದಿ ಹಾಗೂ ಅರ್ಜಿದಾರರ ವಿಚಾರಣೆಗೆ ಸಂಬಂಧಿಸಿದಂತೆ ವಾಹನ ಬಿಡುಗಡೆಯ ಬೇಡಿಕೆಯ ಅರ್ಜಿಯನ್ನು ವಿಲೇವಾರಿಗೆ ಒತ್ತುವುದಿಲ್ಲ ಎಂದು ಈ ಹಂತದಲ್ಲಿಯೇ ಇವರುಗಳು ಹಿಂಜರಿದಿರುತ್ತಾರೆ.

3) ಸದರಿ ಗುನ್ಹೆ ಪ್ರಕರಣ ಘಟಿಸುವ ಪೂರ್ವದಲ್ಲಿ (ದಿನಾಂಕ: 13.8.2001ಕ್ಕೆ ಮುಂಚೆ) ಯ ವಾಹನ ಮಾಲೀಕರಾದ ಶ್ರೀ ಲಾಲಸಾಬ. ಸುಲ್ತಾನಸಾಬ ಮಕಾನದಾರ, ಮನೆ ನಂ.1590 ಪೀರನವಾಡಿ ಗಲ್ಲಿ ಸಾ: ಸಿಂಧಿಕುರಬೆಟ್ಟ ತಾ:ಗೋಕಾಕ ಜಿ: ಬೆಳಗಾವಿ ಇವರಿಗೆ

ದಿನಾಂಕ: 7.9.2002 ಹಾಗೂ ದಿನಾಂಕ: 4.2.2003 ರಂದು ಕಾರಣ ಕೇಳಿ ನೋಟೀಸುಗಳನ್ನು ಪ್ರಾಧಿಕಾರದಿಂದ ನೋಂದಾಯಿತ ಅಂಚೆ ಮೂಲಕ ನೀಡಿದ್ದು ಅರಣ್ಯ ಅಪರಾಧಗಳಲ್ಲಿ ಅನಧಿಕೃತವಾಗಿ ಪಾಲ್ಗೊಂಡಿದ್ದ ವಾಹನ ಕೆಎ 23 ಎಂ-2833 ಟೆಂಪೋ ಟ್ರ್ಯಾಕ್ಸ್‌ನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕೇಳಲಾಗಿತ್ತು. ಸದರಿಯವರು ಅಂಚೆ ಮೂಲಕ ನೋಟೀಸನ್ನು ದಿನಾಂಕ: 7.2.2003 ರಂದು ಸ್ವೀಕರಿಸಿರುವುದು ಸ್ವೀಕೃತಿ ಪತ್ರದಿಂದ ತಿಳಿದು ಬರುತ್ತಲಿದೆ. ಆದರೆ ಸದರಿಯವರು ಈ ಕುರಿತು ತಮ್ಮ ಯಾವುದೇ ಜವಾಬನ್ನು ಸಕ್ಷಮ ಪ್ರಾಧಿಕಾರಕ್ಕೆ ಲಿಖಿತವಾಗಿಯಾಗಲಿ: ನ್ಯಾಯವಾದಿಗಳ ಮೂಲಕ: ಖುದ್ದಾಗಿ ಹಾಜರಾಗಿಯಾಗಲೀ ಸಲ್ಲಿಸಿರುವುದಿಲ್ಲ, ಹಾಗೂ ಸಲ್ಲಿಸುವಲ್ಲಿ ವಿಫಲರಾಗಿರುತ್ತಾರೆ.

4) ಆದಾಗ್ಯೂ ಈ ಪ್ರಾಧಿಕಾರದಿಂದ ಪ್ರಕರಣದ ದಿನಾಂಕ: ನಿಗದಿಪಡಿಸಿ ಪುನಃ ದಿನಾಂಕ: 31.3.2003 ರಂದು ನೋಟೀಸನ್ನು ಘಟನಾ ಪೂರ್ವದ ಹಾಗೂ ನಂತರದ ಮಾಲೀಕರುಗಳಿಗೆ ನೋಂದಣಿ ಅಂಚೆಯ ಮೂಲಕ ಕಳುಹಿಸಲಾಗಿದ್ದು ಅವುಗಳನ್ನು ಸದರಿಯವರುಗಳು ಸ್ವೀಕೃತ ಪತ್ರಕ್ಕೆ ರುಜು ಮಾಡಿ ಪಡೆದುಕೊಂಡಿದ್ದು ಪ್ರಕರಣದ ದಿನಾಂಕ: 9.4.2003 ರಂದು ನ್ಯಾಯ ಪ್ರಾಧಿಕಾರದ ಮುಂದೆ ಹಾಜರಾಗದೇ ಈವರೆಗೂ ಗೈರು ಉಳಿದಿರುತ್ತಾರೆ. ಹಾಗೂ ಸದರಿ ವಾಹನವು ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದಿಲ್ಲವೆಂದು ಸಾಬೀತುಪಡಿಸಲು ವಿಫಲರಾಗಿರುವುದರಿಂದ ವಾಹನವನ್ನು ಅರಣ್ಯ ಅಪರಾಧ ಪ್ರಕರಣದಲ್ಲಿ ತೊಡಗಿಸಿರುವುದು ನಿಜವೆಂದು ಪರಿಗಣಿಸಿ ಪ್ರಾಧಿಕಾರವು ಟೆಂಪೋ ಟ್ರ್ಯಾಕ್ಸ್ ವಾಹನ ನೋಂದಣಿ ಸಂಖ್ಯೆ: ಕೆಎ-23 ಎಂ-2833 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕುರಿತಂತೆ ಈ ಆದೇಶ.

**ಆದೇಶ**

ಈ ಮೇಲೆ ನಮೂದಿಸಲಾದ ಪ್ರಕರಣದ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ. ಎಸ್. ನುಸರತ್ ಷರೀಫ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವಿಜಾಪೂರ ಪ್ರಾದೇಶಿಕ ವಿಭಾಗ, ವಿಜಾಪೂರ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71-ಎ ಯಿಂದ ಬಿ ಅನುಸಾರ, ಹಾಗೂ ಈ ವರೆಗಿನ ತಿದ್ದುಪಡಿಗಳಡಿಯಲ್ಲಿ ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಗ್ರಾಮೀಣ ಪೊಲೀಸ್ ಠಾಣೆ, ವಿಜಾಪೂರ ಇವರ ಗುನ್ಹೆ ಪ್ರಕರಣ ಸಂಖ್ಯೆ: 191: 2001 ರಲ್ಲಿ ಅಕ್ರಮ ಶ್ರೀಗಂಧ ಕಳ್ಳ ಸಾಗಾಣಿಕೆ ಕುರಿತು ಜಪ್ತಿ ಮಾಡಿದ ವಾಹನ ಟೆಂಪೋ ಟ್ರ್ಯಾಕ್ಸ್ ಸಂಖ್ಯೆ ಕೆಎ 23 ಎಂ-2833 ಚೆಸ್ಸಿ ನಂ.-ಟಿ.ಎಕ್ಸ್ 925557 ಎಂ-94, ಇಂಜಿನ್ ನಂ.616.969.111983 ಇದನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸರ್ಕಾರವನ್ನು ಹೊರತುಪಡಿಸಿ ಯಾರಿಗೂ ಸದರಿ ವಾಹನದ ಮೇಲೆ ಯಾವುದೇ ಹಕ್ಕು ಇರುವುದಿಲ್ಲ. ಮುಟ್ಟುಗೋಲು ಹಾಕಿಕೊಂಡ ಸದರಿ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೆ ಮಾಡಲು ಆದೇಶಿಸಿದೆ.

ಈ ಆದೇಶ ಪ್ರಕಟಣೆಯ 30 (ಮೂವತ್ತು) ದಿನಗಳೊಳಗಾಗಿ ಅರ್ಹ ನ್ಯಾಯ ಪ್ರಾಧಿಕಾರಕ್ಕೆ ಯಾರೂ ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಈ ಆದೇಶವನ್ನು ಹೇಳಿ ಬರೆಯಿಸಿ, ತಪ್ಪುಗಳನ್ನು ಸರಿಪಡಿಸಿ ನನ್ನ ರುಜು ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ದಿನಾಂಕ: 25.08.2003 ರಂದು ಆದೇಶಿಸಿದ್ದೇನೆ.

**ಜಿ. ಎಸ್. ನುಸರತ್ ಷರೀಫ್**

ಪಿ.ಆರ್.1022

ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ವಿಜಾಪೂರ ವಿಭಾಗ,
ವಿಜಾಪೂರ.

## ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ವಿಷಯ :** ಆಯೋಗವು ನಡೆಸಿದ 2001ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಅಕೌಂಟ್ಸ್ ಹೈಯರ್ ಪರೀಕ್ಷೆಗೆ ಅಭ್ಯರ್ಥಿಯಾಗಿದ್ದ ಶ್ರೀ ಎಂ. ರಾಮಚಂದ್ರ (ನೋಂದಣಿ ಸಂಖ್ಯೆ: 52227) ಅಬಕಾರಿ ನಿರೀಕ್ಷಕರು, ಇವರು ಸದರಿ ಪರೀಕ್ಷೆಯಲ್ಲಿ ಎಸಗಿದ್ದ ದುರಾಚಾರ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ಅಂತಿಮ ಆದೇಶ.

**ಓದಲಾಗಿದೆ :**

1. ಶ್ರೀ ಎಂ. ರಾಮಚಂದ್ರ ಅವರ ಇಲಾಖಾ ಪರೀಕ್ಷಾ ಅರ್ಜಿ ದಿನಾಂಕ: 21.10.2002.
2. ಉಪಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಅವರ ವರದಿ ದಿನಾಂಕ: 2.12.2002.
3. ಪ್ರಾಚಾರ್ಯರು, ಸೇಂಟ್ ಕ್ಲೇವಿಯರ್ ಬಾಲಕರ ಪ್ರೌಢಶಾಲೆ, ಶಿವಾಜಿನಗರ, ಬೆಂಗಳೂರು, ಇವರ ಪತ್ರ ದಿನಾಂಕ: 2.12.2002.
4. ತಿಳುವಳಿಕೆ ಪತ್ರ ಸಂ. ಆರ್‌ಹೆಚ್‌ಎಸ್ 210/ 02-03/ಪಿಎಸ್‌ಸಿ/ ದಿನಾಂಕ: 11.12.2002.
5. ಶ್ರೀ ಎಂ. ರಾಮಚಂದ್ರರವರ ಲಿಖಿತ ಸಮಜಾಯಿಷಿ ದಿನಾಂಕ: 26.12.2002.
6. ವಿಚಾರಣಾಧಿಕಾರಿಗಳ ವರದಿ ದಿನಾಂಕ: 13.06.2003.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2001ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಪ್ರವೇಶ ಬಯಸಿ ಬೆಂಗಳೂರಿನ ಬಸವನಗುಡಿ ವಲಯದ ಅಬಕಾರಿ ನಿರೀಕ್ಷಕರ ಕಛೇರಿಯಲ್ಲಿ ಅಬಕಾರಿ ಉಪನಿರೀಕ್ಷರಾಗಿರುವ ಶ್ರೀ ಎಂ. ರಾಮಚಂದ್ರರವರು ಉಲ್ಲೇಖ-1ರಲ್ಲಿ ಓದಲಾದಂತೆ ದಿನಾಂಕ: 21.10.2002 ರಂದು ಅರ್ಜಿ ಸಲ್ಲಿಸಿದ್ದು, ಆಯೋಗವು ಅದನ್ನು ಅಂಗೀಕರಿಸಿ, ನಿಯಮಾನುಸಾರ

ನೋಂದಣಿ ಸಂಖ್ಯೆ: 52227ನ್ನು ನೀಡಿ ಇನ್ನಿತರ ಅಭ್ಯರ್ಥಿಗಳಿಗೆ ಕಳುಹಿಸಿದ್ದಂತೆ ಇವರಿಗೂ ಪ್ರವೇಶ ಪತ್ರವನ್ನು ಕಳುಹಿಸಿ ಬೆಂಗಳೂರಿನ ಶಿವಾಜಿನಗರದಲ್ಲಿರುವ ಸೇಂಟ್ ಜೇವಿಯರ್ ಬಾಲಕರ ಪ್ರೌಢಶಾಲೆಯಲ್ಲಿ ಸದರಿ ಪರೀಕ್ಷೆಗೆ ಕುಳಿತುಕೊಳ್ಳಲು ಸೂಚಿಸಿತ್ತು.

ದಿನಾಂಕ: 02.12.2002 ರಂದು ಅಕೌಂಟ್ಸ್ ಹೈಯರ್ ಪರೀಕ್ಷೆಯು ನಡೆಯುತ್ತಿದ್ದ ಸಂದರ್ಭದಲ್ಲಿ ಅನಾಮಧೇಯ ವ್ಯಕ್ತಿಯೊಬ್ಬರು ಆಯೋಗದ ಉಪಕಾರ್ಯದರ್ಶಿಯವರಿಗೆ ದೂರವಾಣಿ ಕರೆಯನ್ನು ಮಾಡಿ ಮೇಲ್ಕಂಡ ಪರೀಕ್ಷಾ ಕೇಂದ್ರದಲ್ಲಿ ಓರ್ವ ಅಭ್ಯರ್ಥಿಯೊಬ್ಬರ ಬದಲಿಗೆ ಬೇರೊಬ್ಬ ವ್ಯಕ್ತಿಯು ಪರೀಕ್ಷೆ ಬರೆಯುತ್ತಿರುವುದಾಗಿ ನೀಡಿದ ದೂರಿನ ಮೇರೆಗೆ ಅದರ ಸತ್ಯಾಂಶ ತಿಳಿಯಲು ಅವರು ಸದರಿ ಪರೀಕ್ಷಾ ಕೇಂದ್ರಕ್ಕೆ ಭೇಟಿ ನೀಡಿ ಪರಿಶೀಲಿಸಲಾಗಿ ನೋಂದಣಿ ಸಂಖ್ಯೆ:52227ರ ಅಭ್ಯರ್ಥಿಯಾದ ಶ್ರೀ ಎಂ. ರಾಮಚಂದ್ರ ಎಂಬುವವರ ಬದಲಿಗೆ ಬೆಂಗಳೂರು ಶೇಷಾದ್ರಿಪುರದ ಪುಸ್ತಕ ವ್ಯಾಪಾರಿಯೆಂದು ಹೇಳಿಕೊಂಡ ಶ್ರೀ ಪಿ.ರಾಜಶೇಖರ ಎಂಬುವರು ಉತ್ತರಗಳನ್ನು ಬರೆಯುತ್ತಿದ್ದುದು ಕಂಡುಬಂದಿದ್ದು ಆತನಿಂದ ಲಿಖಿತ ಹೇಳಿಕೆ ಪಡೆದು ಹತ್ತಿರದ ಆರಕ್ಷಕ ಠಾಣೆಗೆ ಕರೆದ್ಯೊಯುವ ಸಲುವಾಗಿ ಶಾಲೆಯಿಂದ ಹೊರಗೆ ಕರೆತರುತ್ತಿದ್ದಾಗ ಅವರು ತಪ್ಪಿಸಿಕೊಂಡು ಪರಾರಿಯಾದರೆಂದು ಆಯೋಗದ ಉಪಕಾರ್ಯದರ್ಶಿಯವರು ಉಲ್ಲೇಖ-2ರಲ್ಲಿ ಓದಲಾದ ತಮ್ಮ ವರದಿಯಲ್ಲಿ ತಿಳಿಸಿದ್ದರು. ಅದೇ ರೀತಿ ಸದರಿ ಶಾಲೆಯ ಪ್ರಾಚಾರ್ಯರೂ ಸಹ ಉಲ್ಲೇಖ (3) ರಲ್ಲಿ ಓದಲಾದ ದಿನಾಂಕ: 02.12.2002ರ ಪತ್ರದಲ್ಲಿ ಆಯೋಗಕ್ಕೆ ವರದಿ ಮಾಡಿದ್ದರು.

ಹೀಗಾಗಿ ಮೇಲ್ನೋಟಕ್ಕೆ ಪರೀಕ್ಷಾ ಅವ್ಯವಹಾರವಿದೆಯೆಂದು ಕಂಡು ಬಂದ ಕಾರಣ ಅಭ್ಯರ್ಥಿಯಾದ ಶ್ರೀ ಎಂ. ರಾಮಚಂದ್ರ ಅವರಿಗೆ ಉಲ್ಲೇಖ-(4)ರಲ್ಲಿ ಓದಲಾದ ದಿನಾಂಕ: 11.12.2002ರ ತಿಳುವಳಿಕೆ ಪತ್ರವನ್ನು ಜಾರಿಮಾಡಿ ಅವರು ಎಸಗಿರುವ ದುರಾಚಾರಕ್ಕಾಗಿ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸಿ ಅವರ ವಿರುದ್ಧ ನಿಯಾಮಾವಳಿಗಳ ರೀತ್ಯ ಸೂಕ್ತ ಕ್ರಮವನ್ನು ಏಕೆ ಕೈಗೊಳ್ಳಬಾರದೆಂಬುದಕ್ಕೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಆಪಾದಿತ ಅಭ್ಯರ್ಥಿಯು ಉಲ್ಲೇಖ-(5)ರಲ್ಲಿ ಓದಲಾದ ದಿನಾಂಕ: 26.12.2002ರ ಸಮಜಾಯಿಷಿಯಲ್ಲಿ ಅವರ ವಿರುದ್ಧ ಮಾಡಲಾದ ಆರೋಪವನ್ನು ನಿರಾಕರಿಸಿರುತ್ತಾರೆ. ಆದಕಾರಣ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ಹಾಗೂ ವಿಚಾರಣೆಯನ್ನು ಮುಂದುವರಿಸಲು ನಿರ್ಧರಿಸಲಾಯಿತು.

ಆಯೋಗದ ಪರ ವಿಚಾರಣೆಯನ್ನು ಆಯೋಗದ ಕಾರ್ಯದರ್ಶಿ ನಡೆಸಿರುತ್ತಾರೆ. ಈ ಪ್ರಕರಣದ ವರದಿ ಮಾಡಿದ್ದ ಆಯೋಗದ ಉಪಕಾರ್ಯದರ್ಶಿಯವರಾದ ಶ್ರೀ ಡಿ. ಎಸ್. ಮುರಳಿಕೃಷ್ಣರವರು ತಮ್ಮ ಸಾಕ್ಷ್ಯದಲ್ಲಿ ದಿನಾಂಕ: 02.12.2002 ರಂದು ಮಧ್ಯಾಹ್ನ ಸುಮಾರು 4 ಘಂಟೆ 15 ನಿಮಿಷದ ಸಮಯದಲ್ಲಿ ಅನಾಮಧೇಯ ದೂರವಾಣಿ ಕರೆಯೊಂದು ಬಂದಿದ್ದು ಅದರಲ್ಲಿ ಕರೆ ಮಾಡಿದ್ದವರು ಶಿವಾಜಿನಗರದ ಸೇಂಟ್ ಕ್ಸೇವಿಯರ್ ಶಾಲೆಯಲ್ಲಿ ನಡೆಯುತ್ತಿದ್ದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಎಂ. ರಾಮಚಂದ್ರ ಎನ್ನುವ ಅಭ್ಯರ್ಥಿಯ ಬದಲಿಗೆ ಬೇರೊಬ್ಬ ಅಭ್ಯರ್ಥಿಯು ಪರೀಕ್ಷೆ ಬರೆಯುತ್ತಿರುವುದನ್ನು ತಿಳಿಸಿ ನೋಂದಣಿ ಸಂಖ್ಯೆಯನ್ನು ಸಹ ನೀಡಿದ್ದು ಅದರ ಮೇರೆಗೆ ಅವರು ಆಯೋಗದ ಶಾಖಾಧಿಕಾರಿಯಾದ ಶ್ರೀ ಸಿ. ಪಾಂಡುರಂಗನ್‌ರವರೊಂದಿಗೆ ಸದರಿ ಪರೀಕ್ಷಾ ಕೇಂದ್ರಕ್ಕೆ ಭೇಟಿ ನೀಡಿ ಶ್ರೀ ಎಂ. ರಾಮಚಂದ್ರ ಎಂಬುವವರಿಗೆ ನೀಡಲಾಗಿದ್ದ ನೋಂದಣಿ ಸಂಖ್ಯೆಯ ಸ್ಥಳದಲ್ಲಿ ಪರೀಕ್ಷೆ ಬರೆಯುತ್ತಿದ್ದ ವ್ಯಕ್ತಿಯ ಹೆಸರನ್ನು ಕೇಳಲಾಗಿ ಅವರು ಅವರ ಹೆಸರನ್ನು ರಾಮಚಂದ್ರ ಎಂದು ಹೇಳಿಕೊಂಡರೆಂದೂ ಹಾಗೂ ಅವರ ಸಹಿಯು ದಾಖಲೆಗಳಲ್ಲಿದ್ದ ಶ್ರೀ ಎಂ. ರಾಮಚಂದ್ರ ಅವರ ಸಹಿಯನ್ನೇ ಹೋಲುತ್ತಿತ್ತೆಂದೂ ಆದರೆ ಭಾವಚಿತ್ರಗಳಲ್ಲಿ ವ್ಯತ್ಯಾಸವಿದ್ದ ಕಾರಣ ಅನುಮಾನಗೊಂಡು ಆ ಬಗ್ಗೆ ಅವರನ್ನು ಬೇರೊಂದು ಕೊಠಡಿಗೆ ಕರೆದೊಯ್ದು ಹೇಳಿಕೆ ಪಡೆಯುತ್ತಿದ್ದ ಸಂದರ್ಭದಲ್ಲಿ ಅವರು ತಾನು ನಿಜವಾದ ಅಭ್ಯರ್ಥಿಯಾದ ರಾಮಚಂದ್ರ ಅಲ್ಲವೆಂದೂ, ಅವರ ಸ್ನೇಹಿತರಾದ ರಾಜಶೇಖರ ಎಂದೂ ಹಾಗೂ ಅವರು ಸರ್ಕಾರಿ ನೌಕರರೇ ಅಲ್ಲವೆಂದೂ, ಶೇಷಾದ್ರಿಪುರಂನಲ್ಲಿ ಪುಸ್ತಕದ ಅಂಗಡಿಯೊಂದನ್ನು ನಡೆಸುತ್ತಿರುವುದಾಗಿ ಹೇಳಿದರು ಎಂದು ಸಾಕ್ಷಿ ನುಡಿದಿರುತ್ತಾರೆ. ಅವರಿಂದ ತಪ್ಪೊಪ್ಪಿಗೆಯ ಹೇಳಿಕೆಯನ್ನು ಪಡೆದುಕೊಂಡಿದ್ದು ಅದರಲ್ಲಿ ರಾಜಶೇಖರ ಎಂದೇ ಸಹಿ ಮಾಡಿರುವರೆಂದು ಸಹ ತಿಳಿಸಿರುತ್ತಾರೆ. ಮುಂದುವರೆದು ಅವರನ್ನು ಆಯೋಗದ ಕಛೇರಿಗೆ ಕರೆದುಕೊಂಡು ಬರುವ ಉದ್ದೇಶದಿಂದ ಗೇಟಿನ ಬಳಿಯಿದ್ದ ಕಾರಿನ ಬಳಿ ಕರೆದುಕೊಂಡು ಬಂದಾಗ ಅವರು ಓಡಿ ಹೋದರೆಂದು ತಿಳಿಸಿ ವಿಚಾರಣಾ ಕಾಲದಲ್ಲಿ ಹಾಜರಿದ್ದ ಶ್ರೀ ರಾಜಗೋಪಾಲ ಅವರನ್ನು ಆ ವ್ಯಕ್ತಿಯೆಂದು ಗುರುತಿಸಿರುತ್ತಾರೆ ಹಾಗೂ ಆಪಾದಿತ ಅಭ್ಯರ್ಥಿಯಾದ ಶ್ರೀ ರಾಮಚಂದ್ರ ಅವರು ಸದರಿ ದಿನದಂದು ಪರೀಕ್ಷೆ ಬರೆಯುತ್ತಿರಲಿಲ್ಲವೆಂದೂ ಸಹ ತಿಳಿಸಿರುತ್ತಾರೆ.

ಈ ಪ್ರಕರಣದ ಮತ್ತೊಬ್ಬ ಸಾಕ್ಷಿಯಾದ ಸೇಂಟ್ ಕ್ಸೇವಿಯರ್ ಪ್ರೌಢಶಾಲೆಯ ಪ್ರಿನ್ಸಿಪಾಲ್‌ರವರಾದ ಶ್ರೀ ಟಿ. ಫ್ರೆಡರಿಕ್ ಅವರು ತಮ್ಮ ಸಾಕ್ಷ್ಯದಲ್ಲಿ ದಿನಾಂಕ: 02.12.2002ರಂದು ಮಧ್ಯಾಹ್ನ ಆಯೋಗದ ಉಪಕಾರ್ಯದರ್ಶಿಯವರಾದ ಶ್ರೀ ಡಿ.ಎಸ್. ಮುರಳಿಕೃಷ್ಣ ಅವರು ಮತ್ತೊಬ್ಬ ಅಧಿಕಾರಿಯೊಂದಿಗೆ ಅವರ ಶಾಲೆಗೆ ಬಂದು ನೋಂದಣಿ ಸಂಖ್ಯೆಯೊಂದನ್ನು ನೀಡಿ ಆ ಸಂಖ್ಯೆಯ ಅಭ್ಯರ್ಥಿಯನ್ನು ತೋರಿಸಲು ಕೇಳಿದ್ದು ಅದರಂತೆ ಅವರನ್ನು ಪರೀಕ್ಷಾ ಕೊಠಡಿಗೆ ಕರೆದೊಯ್ದು ಅಲ್ಲಿರುವ ಅಭ್ಯರ್ಥಿಗಳ ಪೈಕಿ ಸದರಿ ನೋಂದಣಿ ಸಂಖ್ಯೆಯನ್ನು ಬರೆಯುತ್ತಿದ್ದ ಅಭ್ಯರ್ಥಿಯನ್ನು ತೋರಿಸಿದರೆಂದೂ ತಿಳಿಸಿ ವಿಚಾರಣಾ ಕಾಲದಲ್ಲಿ ಹಾಜರಿದ್ದ ಶ್ರೀ ರಾಜಗೋಪಾಲರವರನ್ನೆ ಆ ವ್ಯಕ್ತಿಯೆಂದೂ ಗುರುತಿಸಿರುತ್ತಾರೆ. ಮುಂದುವರೆದು, ನಿಜವಾದ ಅಭ್ಯರ್ಥಿಯಾದ ಶ್ರೀ ರಾಮಚಂದ್ರರವರನ್ನು ನೋಡಿ ಆ ವ್ಯಕ್ತಿಯು ಆ ದಿನದಂದು ಪರೀಕ್ಷೆ ಬರೆಯುತ್ತಿರಲಿಲ್ಲವೆಂದೂ ಬದಲಿಗೆ ಶ್ರೀ ರಾಜಗೋಪಾಲರವರೇ ಪರೀಕ್ಷೆ ಬರೆಯುತ್ತಿದ್ದು ನಂತರದಲ್ಲಿ ತಾನು ನಿಜವಾದ ಅಭ್ಯರ್ಥಿಯಲ್ಲವೆಂದೂ, ಬದಲಿಗೆ ಅವರ ಸ್ನೇಹಿತನೆಂದು ಹಾಗೂ ಅವರೊಬ್ಬ ಬುಕ್‌ಸ್ಟಾಲ್‌ನ ಮಾಲೀಕನೆಂದು ಹೇಳಿ ಅವರ ಸ್ನೇಹಿತನ ಅಪೇಕ್ಷೆಯಂತೆ ಪರೀಕ್ಷೆ ಬರೆಯಲು ಬಂದಿದ್ದಾಗಿ ಒಪ್ಪಿಕೊಂಡರೆಂದೂ ಹಾಗೂ ಅವರನ್ನು ಆಯೋಗದ ಕಛೇರಿಗೆ ಕರೆದೊಯ್ಯುವ ಸಂದರ್ಭದಲ್ಲಿ ತಪ್ಪಿಸಿಕೊಂಡು ಓಡಿಹೋದರೆಂದು ತಿಳಿಸಿರುತ್ತಾರೆ.

ಪ್ರಕರಣದ ಮತ್ತೊಬ್ಬ ಸಾಕ್ಷಿಯಾದ ಸೇಂಟ್ ಮೇರಿಸ್ ಬಾಲಕರ ಪ್ರಾಥಮಿಕ ಶಾಲೆಯ ಸಹ ಶಿಕ್ಷಕಿಯಾದ ಶ್ರೀಮತಿ ಜಿ. ಅನಿತಾ ರವರು ತಮ್ಮ ಸಾಕ್ಷ್ಯದಲ್ಲಿ ದಿನಾಂಕ: 02.12.2002 ರಂದು ಸದರಿ ಪರೀಕ್ಷೆಗೆ ಕೊಠಡಿ ಪರಿವೀಕ್ಷಕರಾಗಿ ನೇಮಕಗೊಂಡು ಆಪಾದಿತ

ಅಭ್ಯರ್ಥಿಯ ನೋಂದಣಿ ಸಂಖ್ಯೆ ಇದ್ದ ಕೊಠಡಿಯಲ್ಲಿ ಬೆಳಗಿನ ಅಧಿವೇಶನದಲ್ಲಿ ಕಾರ್ಯನಿರ್ವಹಿಸಿದ್ದು ಆಗ ನೋಂದಣಿ ಸಂಖ್ಯೆ: 52227ರ ಜಾಗದಲ್ಲಿ ಪರೀಕ್ಷೆ ಬರೆಯುತ್ತಿದ್ದ ವ್ಯಕ್ತಿಯೆಂದು ವಿಚಾರಣಾ ಕಾಲದಲ್ಲಿ ಹಾಜರಿದ್ದ ಶ್ರೀ ರಾಜಗೋಪಾಲರವರನ್ನು ಗುರುತಿಸಿರುತ್ತಾರೆ. ಅಲ್ಲದೆ ಅವರು ಅಭ್ಯರ್ಥಿಗಳಿಗೆ ಉತ್ತರಪತ್ರಿಕೆಗಳನ್ನು ನೀಡಿ 'ನಮೂನೆ-ಎ' ನಲ್ಲಿ ಅವರ ನೋಂದಣಿ ಸಂಖ್ಯೆ ಉತ್ತರ ಪತ್ರಿಕೆಯ ಸಂಖ್ಯೆ ಹಾಗೂ ಸಹಿಯನ್ನು ಪಡೆದು ಅವರ ಸಹಿಯ ಮುಂದೆ ತಾವು ಸಹಿಮಾಡಿರುತ್ತಾರೆಂದು ಮತ್ತು ಅದನ್ನು ಪ್ರಿನ್ಸಿಪಾಲ್‌ರವರು ದೃಢೀಕರಿಸಿರುತ್ತಾರೆಂದು ತಿಳಿಸಿ ನಮೂನೆ-2ರ 2ನೇ ಪುಟದಲ್ಲಿ ನೋಂದಣಿ ಸಂಖ್ಯೆ: 52227ರ ಎದುರಿಗಿದ್ದ ಉತ್ತರ ಪತ್ರಿಕೆಯ ಸಂಖ್ಯೆ ಮತ್ತು ಅಭ್ಯರ್ಥಿಯ ಸಹಿ ಹಾಗೂ ಅವರ ಸಹಿಗಳನ್ನು ಪರಿಶೀಲಿಸಿ ಅಭ್ಯರ್ಥಿಯ ಸಹಿಯನ್ನು ಮಾಡಿರುವ ವ್ಯಕ್ತಿಯೆಂದು ಶ್ರೀ ರಾಜಗೋಪಾಲರವರನ್ನು ತೋರಿಸಿರುತ್ತಾರೆ ಹಾಗೂ ವಿಚಾರಣಾ ಕಾಲದಲ್ಲಿ ಹಾಜರಿದ್ದ ಆಪಾದಿತ ವ್ಯಕ್ತಿಯನ್ನು ತಾವು ನೋಡಿರುವುದಿಲ್ಲವೆಂದೂ ತಿಳಿಸಿರುತ್ತಾರೆ. ಮುಂದುವರೆದು, ಸದರಿ ನೋಂದಣಿ ಸಂಖ್ಯೆಯಲ್ಲಿದ್ದ ಅಭ್ಯರ್ಥಿಗೆ ನೀಡಿದ್ದ ಉತ್ತರ ಪತ್ರಿಕೆ ಸಂಖ್ಯೆ: ಎಎ-0677749ನ್ನು ಗುರ್ತಿಸಿ ಅದರಲ್ಲಿದ್ದ ಅಭ್ಯರ್ಥಿಯ ಸಹಿ ಶ್ರೀ ರಾಜಗೋಪಾಲ್‌ರವರದೆಂದೂ ಮತ್ತು ಅವರೇ ಆ ಉತ್ತರಪತ್ರಿಕೆಯಲ್ಲಿ ಉತ್ತರಗಳನ್ನು ಬರೆದಿರುತ್ತಾರೆಂದು ತಿಳಿಸಿರುತ್ತಾರೆ. ಹಾಜರಾತಿ ಹಾಳೆಯಲ್ಲಿದ್ದ ಭಾವಚಿತ್ರಕ್ಕೂ ಮತ್ತು ಹಾಜರಿದ್ದ ಅಭ್ಯರ್ಥಿಯ ಮುಖಚರ್ಯೆಗೂ ಸಾಮ್ಯತೆಯಿದ್ದ ಕಾರಣ ಅವರಿಗೆ ಆ ಬಗ್ಗೆ ಸಂಶಯ ಬರಲಿಲ್ಲವೆಂದು ತಿಳಿಸಿರುತ್ತಾರೆ.

ಪ್ರಕರಣದ ಮತ್ತೋರ್ವ ಸಾಕ್ಷಿಯಾದ ಸೇಂಟ್ ಕ್ಲೇವಿಯರ್ ಬಾಲಕರ ಪ್ರೌಢಶಾಲೆಯ ಸಹ ಶಿಕ್ಷಕರಾದ ಶ್ರೀ ಸಿ. ಜಿ. ನರಸಿಂಹಭಟ್ಟರವರೂ ಸಹ ತಮ್ಮ ಸಾಕ್ಷ್ಯದಲ್ಲಿ ದಿನಾಂಕ: 02.12.2002ರ ಮಧ್ಯಾಹ್ನದ ಅಧಿವೇಶನದಲ್ಲಿ ನೋಂದಣಿ ಸಂಖ್ಯೆ: 52227ರ ಕೊಠಡಿಯ ಪರಿವೀಕ್ಷಕರಾಗಿ ಕಾರ್ಯನಿರ್ವಹಿಸಿದ್ದು, ಆ ಸಮಯದಲ್ಲಿ ಸದರಿ ನೋಂದಣಿ ಸಂಖ್ಯೆಯ ಸ್ಥಳದಲ್ಲಿ ಪರೀಕ್ಷೆ ಬರೆಯುತ್ತಿದ್ದ ವ್ಯಕ್ತಿಯೆಂದು ಶ್ರೀ ರಾಜಗೋಪಾಲ್ ರವರನ್ನೇ ಗುರ್ತಿಸಿರುತ್ತಾರೆ ಹಾಗೂ ವಿಚಾರಣಾ ಕಾಲದಲ್ಲಿ ಹಾಜರಿದ್ದ ಆಪಾದಿತ ಅಭ್ಯರ್ಥಿಯಾದ ಶ್ರೀ ರಾಮಚಂದ್ರರವರು ಆ ದಿನ ಅಲ್ಲಿರಲಿಲ್ಲವೆಂದು ತಿಳಿಸಿರುತ್ತಾರೆ. ಬೆಳಗಿನ ಅಧಿವೇಶನದಂತೆ ಮಧ್ಯಾಹ್ನದ ಅಧಿವೇಶನದಲ್ಲಿಯೂ ಸಹ ಅಭ್ಯರ್ಥಿಗಳಿಗೆ ಉತ್ತರಪತ್ರಿಕೆಗಳನ್ನು ನೀಡಿ ನಮೂನೆ 'ಎ' ರಲ್ಲಿ ಅವರುಗಳ ನೋಂದಣಿ ಸಂಖ್ಯೆ, ಉತ್ತರ ಪತ್ರಿಕೆಗಳ ಸಂಖ್ಯೆ, ಹಾಗೂ ಸಹಿಗಳನ್ನು ಪಡೆದಿದ್ದು ಆ ಸಂದರ್ಭದಲ್ಲಿ ನೋಂದಣಿ ಸಂಖ್ಯೆ: 52227ರ ಅಭ್ಯರ್ಥಿಯ ಸಹಿಯನ್ನು ಶ್ರೀ ರಾಜಗೋಪಾಲ್‌ರವರೇ ಮಾಡಿರುತ್ತಾರೆಂದು ಹಾಗೂ ಅವರಿಗೆ ನೀಡಲಾದ ಉತ್ತರಪತ್ರಿಕೆ ಸಂಖ್ಯೆ:32736ನ್ನು ಗುರ್ತಿಸಿ ಅದರಲ್ಲಿರುವ ಸಹಿ ಅವರದೆಂದೂ ತಿಳಿಸಿರುತ್ತಾರೆ. ಮುಂದುವರೆದು, ಸದರಿ ದಿನದಂದು ಆಯೋಗದ ಉಪಕಾರ್ಯದರ್ಶಿಯವರಾದ ಶ್ರೀ ಡಿ. ಎಸ್. ಮುರಳಿಕೃಷ್ಣರವರು ಪರೀಕ್ಷೆಯ ಕೊನೆಯ ಹಂತದಲ್ಲಿ ಪರೀಕ್ಷಾ ಕೊಠಡಿಗೆ ಪ್ರಿನ್ಸಿಪಾಲ್ ಹಾಗೂ ಇನ್ನೋರ್ವ ಅಧಿಕಾರಿಯೊಂದಿಗೆ ಬಂದಿದ್ದು, ಸದರಿ ನೋಂದಣಿ ಸಂಖ್ಯೆಯ ಅಭ್ಯರ್ಥಿಯನ್ನು ತೋರಿಸಲು ಕೇಳಿದರೆಂದೂ ಅದರ ಮೇರೆಗೆ ಅವರು ಆ ನೋಂದಣಿ ಸಂಖ್ಯೆಯ ಸ್ಥಳದಲ್ಲಿ ರಾಮಚಂದ್ರ ಎಂದು ಹೇಳಿಕೊಂಡು ಉತ್ತರ ಬರೆಯುತ್ತಿದ್ದ ಶ್ರೀ ರಾಜಗೋಪಾಲರವರನ್ನು ತೋರಿಸಿದರೆಂದು ಆ ನಂತರ ಅವರುಗಳು ಆ ಅಭ್ಯರ್ಥಿಯನ್ನು ಹೊರಗಡೆ ಕರೆದುಕೊಂಡು ಹೋದರೆಂದೂ ತಿಳಿಸಿರುತ್ತಾರೆ.

ಪ್ರಕರಣದ ಮತ್ತೋರ್ವ ಸಾಕ್ಷಿಯಾದ ಶ್ರೀ ಎಸ್. ಕುಮಾರ್, ಅಬಕಾರಿ ನಿರೀಕ್ಷಕರು, ಬಸವನಗುಡಿ ವಲಯ, ಬೆಂಗಳೂರು, ಇವರು ತಮ್ಮ ಸಾಕ್ಷ್ಯದಲ್ಲಿ ಆಪಾದಿತ ಅಭ್ಯರ್ಥಿಯಾದ ಶ್ರೀ ರಾಮಚಂದ್ರ ಅವರು ಅವರ ಅಧೀನದಲ್ಲಿಯೇ ಕಾರ್ಯನಿರ್ವಹಿಸುತ್ತಿರುತ್ತಾರೆಂದೂ ಮತ್ತು ಅವರ ಇಲಾಖಾ ಪರೀಕ್ಷೆಯ ಅರ್ಜಿಯು ಅವರ ಮೂಲಕವೇ ಆಯೋಗಕ್ಕೆ ಸಲ್ಲಿಸಲ್ಪಟಿರುತ್ತದೆಯೆಂದೂ ಹಾಗೂ ಹಾಜರಾತಿ ಹಾಳೆಯಲ್ಲಿನ ಭಾವಚಿತ್ರವೂ ಸಹ ಅವರದೇ ಎಂದು ಗುರ್ತಿಸಿರುತ್ತಾರೆ. ಅಲ್ಲದೆ, ಸದರಿ ಅಭ್ಯರ್ಥಿಯು ದಿನಾಂಕ: 02.12.2002 ರಂದು ಕರ್ತವ್ಯಕ್ಕೆ ಹಾಜರಾಗಿದ್ದರೆಂದು ತಿಳಿಸಿ ಪರೀಕ್ಷಾ ಹಾಜರಾತಿ ಹಾಳೆಯಲ್ಲಿನ ಸಹಿಯು ಆಪಾದಿತ ಅಭ್ಯರ್ಥಿಯದಲ್ಲವೆಂದು ದೃಢೀಕರಿಸಿರುತ್ತಾರೆ.

ಆಪಾದಿತ ಅಭ್ಯರ್ಥಿಯ ಬದಲಿಗೆ ಪರೀಕ್ಷೆಯಲ್ಲಿ ಉತ್ತರ ಬರೆದ ಶ್ರೀ ಆರ್. ರಾಜಗೋಪಾಲರವರು ತಮ್ಮ ಹೇಳಿಕೆಯಲ್ಲಿ, ಅವರು ದಿನಾಂಕ: 02.12.2002 ರಂದು ಶಿವಾಜಿನಗರದ ಸೇಂಟ್ ಕ್ಲೇವಿಯರ್ ಪ್ರೌಢಶಾಲೆಯಲ್ಲಿ ಎಂ. ರಾಮಚಂದ್ರ ಅವರ ಬದಲಿಗೆ ಪರೀಕ್ಷೆಯಲ್ಲಿ ಬರೆದಿರುವರೆಂಬ ಮಾತು ನಿಜವಲ್ಲವೆಂದೂ, ಈ ವಿಚಾರಣೆಯಲ್ಲಿ ಸಾಕ್ಷಿದಾರರು ಹೇಳಿರುವುದನ್ನು ಕೇಳಿಸಿಕೊಂಡಿರುವುದಾಗಿಯೂ, ಮತ್ತು ಅವರು ರಾಮಚಂದ್ರ ಎನ್ನುವ ಅಭ್ಯರ್ಥಿಯ ಸ್ಥಾನದಲ್ಲಿ ತಾನು ಪರೀಕ್ಷೆ ಬರೆದೆ ಎಂದು ಹೇಳಿದ್ದನ್ನು ಒಪ್ಪಿಕೊಳ್ಳುವುದಿಲ್ಲವೆಂತಲೂ, ಹಾಗೂ ಅವರುಗಳು ತನ್ನನ್ನೇ ಹೋಲುವ ಬೇರೆ ವ್ಯಕ್ತಿಯನ್ನು ಅಲ್ಲಿ ನೋಡಿರಬಹುದೆಂತಲೂ, ಅಲ್ಲದೆ ಆ ದಿನದಂದು ತಾನು ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದುದಾಗಿಯೂ ತಿಳಿಸುತ್ತಾ ಸಾಕ್ಷಿ ನುಡಿದಿರುವ ನಾಲ್ಕೂ ಮಂದಿಯನ್ನು ತಾನು ಈ ಮೊದಲು ನೋಡಿಯೇ ಇಲ್ಲವೆಂತಲೂ, ಅವರು ಮತ್ತು ಆರೋಪಿತ ಅಭ್ಯರ್ಥಿ ರಾಮಚಂದ್ರರವರು ಒಂದೇ ಇಲಾಖೆಗೆ ಸೇರಿದ್ದು ಸತ್ಯಾಂಶ ಒಪ್ಪಿಕೊಂಡಲ್ಲಿ ತಮಗೂ ಮತ್ತು ಅವರಿಗೂ ತೊಂದರೆ ಉಂಟಾಗುತ್ತದೆಂದು ಸತ್ಯಾಂಶವನ್ನು ಒಪ್ಪಿಕೊಳ್ಳುತ್ತಿಲ್ಲ ಎನ್ನುವ ಮಾತು ಸರಿಯಲ್ಲವೆಂದೂ, ಹಾಜರಾತಿ ಪತ್ರದಲ್ಲಿನ ಸಹಿ, ನಮೂನೆ 'ಎ' ದಲ್ಲಿನ ಸಹಿ, ಮತ್ತು ಉತ್ತರ ಪತ್ರಿಕೆಗಳಲ್ಲಿನ ಹಸ್ತಾಕ್ಷರಗಳನ್ನು ವಿಚಾರಣಾ ಕಾಲದಲ್ಲಿ ನೋಡಿದ್ದು ಅವು ಅವರದಾಗಿರುವುದಿಲ್ಲವೆಂದೂ ಹೇಳಿರುತ್ತಾರೆ. ಮುಂದುವರಿದು, ಆರೋಪಿ ಅಭ್ಯರ್ಥಿಯ ಪಾಟಿ ಸವಾಲಿಗೆ ಉತ್ತರಿಸುತ್ತಾ ಆರೋಪಿ ಅಭ್ಯರ್ಥಿಯು ತನಗೆ ಪರೀಕ್ಷೆಯ ಪ್ರವೇಶಪತ್ರ ಕಳುಹಿಸಿಕೊಟ್ಟಿರಲಿಲ್ಲವೆಂದೂ ಹಾಗೂ ಪರೀಕ್ಷೆಯನ್ನು ಅವರ ಪರವಾಗಿ ಬರೆಯಲು ಪ್ರಚೋದನೆ ಮಾಡಲಿಲ್ಲವೆಂತಲೂ ಹೇಳಿರುತ್ತಾರೆ.

ಆಪಾದಿತ ಅಭ್ಯರ್ಥಿಯಾದ ಶ್ರೀ ರಾಮಚಂದ್ರ ಅವರು ತಮ್ಮ ಹೇಳಿಕೆಯಲ್ಲಿ ಅವರು ಇಲಾಖಾ ಪರೀಕ್ಷೆಗೆ ಅರ್ಜಿ ಸಲ್ಲಿಸಿದ್ದುದು ನಿಜವೆಂದೂ ಆದರೆ ಅಕೌಂಟ್ಸ್ ಹೈಯರ್ ವಿಷಯದ ಪರೀಕ್ಷೆ ದಿನಾಂಕ: 02.12.2002 ರಂದು ಇತ್ತೆಂಬ ವಿಷಯವು ಅವರಿಗೆ ತಿಳಿದಿರಲಿಲ್ಲವೆಂದೂ ಕಾರಣ, ಪರೀಕ್ಷೆಗೆ ಸಂಬಂಧಿಸಿದ ಟೈಂಟೇಬಲ್ ಅನ್ನು ಅವರು ನೋಡಿರಲಿಲ್ಲವೆಂದೂ ಹಾಗೂ ಪರೀಕ್ಷೆಗೆ ಅರ್ಜಿ

ಸಲ್ಲಿಸಿದ ನಂತರ ಪರೀಕ್ಷೆಗಳು ಎಂದು ನಡೆಯುವುದೆಂದು ತಿಳಿದುಕೊಳ್ಳಲು ಅವರು ಪ್ರಯತ್ನಿಸಲಿಲ್ಲವೆಂದೂ, ಪರೀಕ್ಷೆಗೆ ಸಂಬಂಧಪಟ್ಟ ಪ್ರವೇಶಪತ್ರವು ಅವರಿಗೆ ತಲುಪಲಿಲ್ಲವೆಂದೂ, ಅವರ ಕಛೇರಿಯಲ್ಲಿ ಬೇರೆ ಯಾರಾದರೂ ಈ ಪರೀಕ್ಷೆಗೆ ಕಟ್ಟಿದ್ದರೋ ಎಂಬುದು ಅವರಿಗೆ ಅರಿವಿಲ್ಲವೆಂದೂ, ಕಾಯಂ ಅವರಿಗೆ ಕಛೇರಿ ಹೊರಗೆ ಎಕ್ಸಿಕ್ಯೂಟಿವ್ ಕೆಲಸ ಹೆಚ್ಚಾಗಿರುತ್ತದೆಯೆಂದೂ ತಿಳಿಸಿರುತ್ತಾರೆ. ಮುಂದುವರೆದು, ಅವರಿಗೆ ಅಬಕಾರಿ ಗಾರ್ಡ್ ಆಗಿರುವ ರಾಜಗೋಪಾಲರ ಪರಿಚಯವಿದೆಯೆಂದೂ, ಅವರು ದಿನಾಂಕ: 02.12.2002 ರಂದು ಅವರ ಬದಲು ಪರೀಕ್ಷೆಗೆ ಹಾಜರಾಗಿ ಬರೆದರೆಂಬುದು ಅವರಿಗೆ ತಿಳಿದಿರಲಿಲ್ಲವೆಂದೂ, ವಿಚಾರಣೆ ಸಮಯದಲ್ಲಿ ಸಾಕ್ಷಿ ನೀಡಿರುವ ಎಲ್ಲರೂ ಇದರ ಬಗ್ಗೆ ಹೇಳಿದಾಗ ಕೇಳಿಸಿಕೊಂಡಿರುವುದಾಗಿಯೂ, ಹಾಗೂ ದಿನಾಂಕ: 02.12.2002 ರಂದು ನಡೆದ ಪರೀಕ್ಷೆಯಲ್ಲಿ ಶ್ರೀ ರಾಜಗೋಪಾಲ್ ರವರು ತಾನೇ ರಾಮಚಂದ್ರ ಎಂದು ಹೇಳಿಕೊಂಡು ಪರೀಕ್ಷೆ ಬರೆದರು ಎನ್ನುವ ಮಾತನ್ನೂ ಸಹ ಕೇಳಿರುತ್ತಾರೆಂದೂ ಆದರೆ ಸದರಿ ಸಾಕ್ಷಿದಾರರು ಹೇಳಿದ ಮಾತನ್ನು ಒಪ್ಪುವುದಿಲ್ಲವೆಂದೂ ಹಾಗೂ ಸದರಿ ರಾಜಗೋಪಾಲ್‌ರವರಿಗೆ ಪ್ರವೇಶಪತ್ರ ನೀಡಿ ಪರೀಕ್ಷೆಯನ್ನು ಅವರ ಪರವಾಗಿ ಬರೆಯಲು ತಿಳಿಸಿದ್ದರೆಂಬುದನ್ನೂ ಸಹ ಒಪ್ಪಿಕೊಳ್ಳುವುದಿಲ್ಲವೆಂದೂ ತಿಳಿಸಿ, ದಿನಾಂಕ: 02.12.2002 ರಂದು ಪರೀಕ್ಷೆಯಲ್ಲಿ ಶ್ರೀ ರಾಜಶೇಖರ ಎನ್ನುವವರು ಸಹಿ ಮಾಡಿರುವ ಲಿಖಿತ ಹೇಳಿಕೆ ಓದಿರುವುದಾಗಿಯೂ ಅವರು ಹೇಳಿಕೊಂಡಂತೆ ಅವರ ಪರವಾಗಿ ಪರೀಕ್ಷೆ ಬರೆಯಲು ಅವರಿಗೆ ಹೇಳಿರುವುದಿಲ್ಲವೆಂದೂ ಹಾಗೂ ಅವರಿಗೆ ಪ್ರವೇಶಪತ್ರ ನೀಡಿರುವುದಿಲ್ಲವೆಂದೂ, ಕಾರಣ ಅವರಿಗೆ ಅಂತಹ ಪತ್ರ ತಲುಪಲೇ ಇಲ್ಲವೆಂದೂ, ವಿಚಾರಣಾ ಕಾಲದಲ್ಲಿ ಹಾಜರುಪಡಿಸಿದ ಹಾಜರಾತಿ ಪತ್ರವನ್ನು ನೋಡಿರುವುದಾಗಿಯೂ ಮತ್ತು ಅದರಲ್ಲಿನ ಫೋಟೋ ಅವರದೇ ಎಂದೂ, ಹಾಗೂ ಅಭ್ಯರ್ಥಿಯ ಸಹಿ ಎನ್ನುವೆಡೆ ಇರುವ ಸಹಿ ಅವರದೇ ಎಂದೂ, ಆದರೆ ದಿನಾಂಕ: 02.12.2002 ರಂದು ಮಾಡಿರುವ ಸಹಿಗಳು ಅವರದಲ್ಲವೆಂದೂ, ಅವರ ಸಹಿಯಂತೆಯೇ ಬೇರೊಬ್ಬರು ಸಹಿ ಮಾಡಲು ಪ್ರಯತ್ನಿಸಿರುವುದು ದಿಟವೆಂದೂ ಹೇಳಿರುತ್ತಾರೆ.

ಈ ಪ್ರಕರಣದ ಸಾಕ್ಷಿಗಳ ಹೇಳಿಕೆಗಳನ್ನು ಗಮನಿಸಲಾಗಿ ಸದರಿ ಪರೀಕ್ಷಾ ದಿನದಂದು ಬೆಳಗಿನ ಅಧಿವೇಶನದಲ್ಲಿ ಸಂಬಂಧಿತ ಕೊಠಡಿಯ ಪರಿವೀಕ್ಷಕರಾಗಿ ಕಾರ್ಯನಿರ್ವಹಿಸಿದ್ದ ಶ್ರೀಮತಿ ಅನಿತಾರವರು ತಮ್ಮ ಸಾಕ್ಷ್ಯದಲ್ಲಿ ಆ ದಿನದಂದು ವಿತರಿಸಲಾದ ಉತ್ತರ ಪತ್ರಿಕೆಗಳಲ್ಲಿನ ಅಭ್ಯರ್ಥಿಯ ಸಹಿಯನ್ನು ಗುರ್ತಿಸಿರುತ್ತಾರೆ ಹಾಗೂ ವಿಚಾರಣೆ ಸಮಯದಲ್ಲಿ ಉಪಸ್ಥಿತರಿದ್ದ ಆರೋಪಿತ ಅಭ್ಯರ್ಥಿ ಹಾಗೂ ರಾಜಗೋಪಾಲರವರನ್ನು ನೋಡಿ ಪರೀಕ್ಷೆಯಲ್ಲಿ ಉತ್ತರಗಳನ್ನು ಬರೆಯುತ್ತಿದ್ದ ವ್ಯಕ್ತಿ ಎಂದು ರಾಜಗೋಪಾಲರವರನ್ನು ಗುರ್ತಿಸಿರುತ್ತಾರೆ. ಅದೇ ರೀತಿ ಮಧ್ಯಾಹ್ನದ ಅಧಿವೇಶನದಲ್ಲಿ ಪರಿವೀಕ್ಷಕರಾಗಿ ಕಾರ್ಯನಿರ್ವಹಿಸಿದ್ದ ಶ್ರೀ ಸಿ. ಜಿ. ನರಸಿಂಹ ಭಟ್ಟರೂ ಸಹ ಶ್ರೀ ರಾಜಗೋಪಾಲರನ್ನು ಗುರ್ತಿಸಿ ಅವರೇ ಪರೀಕ್ಷೆಗೆ ಹಾಜರಾಗಿದ್ದು ಉತ್ತರಗಳನ್ನು ಬರೆದವರೆಂದೂ ತಿಳಿಸಿರುತ್ತಾರೆ. ಮುಂದುವರೆದು, ಮತ್ತೊಬ್ಬ ಸಾಕ್ಷಿಯಾದ ಸೇಂಟ್ ಕ್ಲೇವಿಯರ್ ಪ್ರೌಢಶಾಲೆಯ ಪ್ರಾಂಶುಪಾಲರಾದ ಶ್ರೀ ಟಿ. ಫೆಡಿರಿಕ್ ಅವರೂ ಸಹ ತಮ್ಮ ಸಾಕ್ಷ್ಯದಲ್ಲಿ ಸದರಿ ದಿನದಂದು ನಡೆದ ಪ್ರಕರಣವನ್ನು ವಿವರಿಸುತ್ತಾ ಆಯೋಗದ ಉಪ ಕಾರ್ಯದರ್ಶಿಯವರ ಹೇಳಿಕೆಯನ್ನು ಸಮರ್ಥಿಸಿ ನೋಂದಣಿ ಸಂಖ್ಯೆ: 52227ಕ್ಕೆ ಮೀಸಲಾದ ಸ್ಥಳದಲ್ಲಿ ಪರೀಕ್ಷೆ ಬರೆಯುತ್ತಿದ್ದ ವ್ಯಕ್ತಿ ರಾಜಗೋಪಾಲ್ ಎಂದು ಅವರನ್ನೇ ಗುರುತಿಸಿರುತ್ತಾರೆ. ಎಲ್ಲ ಸಾಕ್ಷಿಗಳು ಶ್ರೀ ರಾಜಗೋಪಾಲ್ ರವರೇ ಪರೀಕ್ಷೆಯಲ್ಲಿ ರಾಮಚಂದ್ರ ಎಂದು ಹೇಳಿಕೊಂಡು ಉತ್ತರ ಬರೆದಿರುತ್ತಾರೆಂದು ಅನುಮಾನಕ್ಕಾಸ್ಪದವಿಲ್ಲದಂತೆ ಗುರ್ತಿಸಿದ್ದು ಅವರುಗಳನ್ನು ಆಪಾದಿತ ಅಭ್ಯರ್ಥಿಯಾಗಲಿ ಅಥವಾ ಅವರ ಬದಲಿಗೆ ಪರೀಕ್ಷೆಯನ್ನು ಬರೆದ ರಾಜಗೋಪಾಲ್‌ರವರಾಗಲಿ ಪಾಟೀ ಸವಾಲು ಮಾಡದಿದ್ದ ಕಾರಣ ಸಾಕ್ಷಿಗಳ ಹೇಳಿಕೆಗಳನ್ನು ನಂಬದಿರಲು ಯಾವುದೇ ಕಾರಣಗಳು ಕಂಡು ಬರುತ್ತಿಲ್ಲವೆಂದೂ ಅಲ್ಲದೆ ಆಪಾದಿತ ಅಭ್ಯರ್ಥಿಯ ಮೇಲಧಿಕಾರಿಯವರೂ ಸಹ ಆಪಾದಿತ ಅಭ್ಯರ್ಥಿಯು ಆ ದಿನದಂದು ಕಛೇರಿ ಕೆಲಸಗಳಿಗೆ ಹಾಜರಾಗಿರುತ್ತಾರೆಂದು ತಿಳಿಸಿರುವುದರಿಂದ ಇವರು ಆ ದಿನದಂದು ಪರೀಕ್ಷೆಗೆ ಗೈರುಹಾಜರಾಗಿರುವುದು ದೃಢಪಟ್ಟಿರುತ್ತದೆಯೆಂದು ಹಾಗೂ ಈ ಎಲ್ಲ ದಾಖಲೆ ಮತ್ತು ಸಾಕ್ಷಿಗಳ ಹೇಳಿಕೆಗಳ ಆಧಾರದ ಮೇಲೆ ಸದರಿ ಪರೀಕ್ಷೆಯಲ್ಲಿ ಆಪಾದಿತ ಅಭ್ಯರ್ಥಿಯ ಪರವಾಗಿ ಅದೇ ಇಲಾಖೆಯ ಶ್ರೀ ರಾಜಗೋಪಾಲ್ ಎಂಬುವವರು ಅನಧಿಕೃತವಾಗಿ ಉತ್ತರ ಬರೆದಿರುವುದು ನಿಜವೆಂದು ದೃಢವಾಗುತ್ತದೆ. ಯಾವುದೇ ದುರುದ್ದೇಶ ಹಾಗೂ ಶಾಮೀಲಾತಿಯಲ್ಲದೆ ರಾಜಗೋಪಾಲ್ ಆರೋಪಿತ ರಾಮಚಂದ್ರ ಅವರ ಬದಲು ಪರೀಕ್ಷೆ ಬರೆಯಲು ಸಕಾರಣಗಳಿರುವುದಿಲ್ಲ. ಆಯೋಗದ ಮುಂದೆ ಇರುವ ಎಲ್ಲಾ ಸಾಕ್ಷಿ ಪುರಾವೆಗಳನ್ನು ಪರಿಶೀಲಿಸಿದಾಗ ಆರೋಪಿತ ರಾಮಚಂದ್ರ ಅವರಿಗೆ ಸಹಾಯ ಮಾಡುವ ಉದ್ದೇಶದಿಂದ, ಮತ್ತು ಅವರೊಂದಿಗೆ ಶಾಮೀಲಾತಿಯಿಂದ ಹಾಗೂ ಆರೋಪಿ ರಾಮಚಂದ್ರ ಅವರಿಗೆ ತಿಳಿದಂತೆ ಮತ್ತು ಅವರ ಸಹಮತಿ ಮೇರೆಗೆ ಅವರ ಸ್ಥಾನದಲ್ಲಿ ತಾನೆ ರಾಮಚಂದ್ರ ಎಂದು ಹೇಳಿಕೊಂಡು ಪರೀಕ್ಷೆ ಬರೆದರು ಎಂದೂ ಸಹ ದೃಢವಾಗುತ್ತದೆ.

ಆಯೋಗವು ಈ ಪ್ರಕರಣವನ್ನು ಸಂಬಂಧಿತ ಸಾಕ್ಷ್ಯ ಹಾಗೂ ದಾಖಲೆಗಳ ಹಿನ್ನಲೆಯಲ್ಲಿ ಕೂಲಂಕಷವಾಗಿ ಪರೀಶಿಲಿಸಿ ಆಪಾದಿತ ಅಭ್ಯರ್ಥಿಯ ವಿರುದ್ಧ ಮಾಡಲಾದ ಆರೋಪವು ನಿಸ್ಸಂದಿಗ್ಧವಾಗಿ ಸಾಬೀತಾಗಿರುವ ಕಾರಣ 1965ರ ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಡೆಸುವಿಕೆ) ನಿಯಮಾವಳಿಗಳ ನಿಯಮ 14 ಹಾಗೂ ದಿನಾಂಕ: 14.07.1993ರ ಆಯೋಗದ ಅಧಿಕೃತ ಜ್ಞಾಪನದನ್ವಯ ಅವರಿಗೆ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಅದರಂತೆ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ (1) 508:2003-04/ ಪಿಎಸ್‌ಸಿ ದಿನಾಂಕ: 18ನೇ ಆಗಸ್ಟ್ 2003**

1965ರ ಕರ್ನಾಟಕ ಲೋಕಸೇವಾ ಆಯೋಗದ (ಇಲಾಖಾ ಪರೀಕ್ಷೆಗಳ ನಡೆಸುವಿಕೆ) ನಿಯಮಾವಳಿಗಳ ನಿಯಮ 14 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ದಿನಾಂಕ: 14.07.1993ರ ಅಧಿಕೃತ ಜ್ಞಾಪನ ಸಂಖ್ಯೆ: ADM:398/94-95/ ಪಿಎಸ್‌ಸಿ ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿಯಾದ ಶ್ರೀ ಎಂ. ರಾಮಚಂದ್ರ ಅಬಕಾರಿ ಉಪನಿರೀಕ್ಷಕರು, ಅಬಕಾರಿ ನಿರೀಕ್ಷಕರ ಕಛೇರಿ (ಬಸವನಗುಡಿ ವಲಯ) ಜೆ.ಸಿ. ರಸ್ತೆ, ಬೆಂಗಳೂರು-560027 ಅವರ 2001ನೇ ಸಾಲಿನ ದ್ವಿತೀಯ ಅಧಿವೇಶನದ

ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನೂ ಈ ಮೂಲಕ ರದ್ದುಪಡಿಸಿದೆ ಮತ್ತು ಅವರಿಗೆ "2001ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯನ್ನೊಳಗೊಂಡಂತೆ ಕರ್ನಾಟಕ ಲೋಕಸೇವಾ ಆಯೋಗವು ನಡೆಸುವ ಯಾವುದೇ ಪರೀಕ್ಷೆಗೆ ಶಾಶ್ವತವಾಗಿ ಅನರ್ಹತೆಗೊಳಿಸುವ" ದಂಡನೆಯನ್ನು ವಿಧಿಸಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್.1024

**ಬಿ. ಎ. ಹರೀಶ್‌ಗೌಡ**

ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**PUBLIC NOTICE**

**ANGLIAN WATER INTERNATIONAL PRIVATE LIMITED**

**Regd. Office: 105 1st 'A' Main, 2nd Cross, S.T. Bed Layout, Koramangala, Bangalore-560 034**

Notice is hereby given for general information that the members of ANGLIAN WATER INTERNATIONAL PRIVATE LIMITED at the Extra-ordinary General Meeting of the Company held on 1st September, 2003 at its registered Office, have passed the following Special Resolution to wind up the above company voluntarily:

"**RESOLVED THAT** pursuant to Section 484 (1) (b) of the Companies Act, 1956 the Company be wound up voluntarily"

Place: Bangalore
Date: 1st September, 2003

By Order of Board
**S. K. KANTHARAJ**, Liquidator.

**FORM No. 151 (See Rule 315)**

**Members' Voluntary Winding up**

**Notice of Appointment of Liquidator pursuant to section 516**

| | |
|---|---|
| Name of the Company | ANGLIAN WATER INTERNATIONAL PRIVATE LIMITED |
| Nature of Business | Design, Construct, Manufacture, Purchase, sell etc in plant equipment for collection, distribution, treatment of water, waste water, sewage and prevention of air, water and environment pollution. |
| Address of Registered Office | 105, 1st 'A' Main, 2nd Cross, S. T. Bed Layout, Koramangala, Bangalore-560 034 |
| Name & Address of Liquidator | S. K. Kantharaj 160, "SAPTAGIRI NILAYA", 3rd Cross, 4th Block, Koramangala, Bangalore-560 034. |
| Date of Appointment | 1st September 2003 |
| By whom appointed | Members in their meeting held on 01.09.2003 |

Place: Bangalore
Date: 1st September, 2003

**S. K. KANTHARAJ,**
Liquidator.

**ಸಾರ್ವಜನಿಕ ತಿಳುವಳಿ**

**ಆಂಗ್ಲಿಯನ್ ವಾಟರ್ ಇಂಟರ್ ನ್ಯಾಷಿನಲ್ (ಪ್ರೈ) ಲಿಮಿಟೆಡ್**

**ರಿ. ಕಛೇರಿ: 105, 1ನೇ ಮೈನ್, 2ನೇ ಕ್ರಾಸ್, ಎಸ್.ಟಿ. ಬೆಡ್ ಲೇಔಟ್ ಕೋರಮಂಗಲ, ಬೆಂಗಳೂರು 560- 034.**

ಸಾಮಾನ್ಯ ತಿಳುವಳಿಗಾಗಿ ಈ ಮೂಲಕ ಆಂಗ್ಲಿಯನ್ ವಾಟರ್ ಇಂಟರ್ ನ್ಯಾಷಿನಲ್ ಪ್ರೈ. ಲಿ ನ ಸದಸ್ಯರು ತಿಳಿಸುವುದೇನೆಂದರೇ ಕಂಪನಿ ತನ್ನ ಹೆಚ್ಚುವರಿ ಸಾಮಾನ್ಯ ಸಭೆ 1, ಸೆಪ್ಟೆಂಬರ್ 2003 ರಂದು ತನ್ನ ಕಛೇರಿಯಲ್ಲಿ ನಡೆದಿದ್ದು ಈ ಮೂಲಕ ಕೆಳ ತಿಳಿಸಿರುವ ಧೃಡ ಸಂಕಲ್ಪವೇನೆಂದರೇ ಮೇಲೆ ತಿಳಿಸಲ್ಪಟ್ಟ ಕಂಪನಿಯನ್ನು ಸ್ವಯಿಚ್ಛೆ ಪೂರ್ವ ಪರಿಸಮಾಪನ ಮಾಡುವುದು. ಈ ಮೂಲಕ ಧೃಡ ಸಂಕಲ್ಪದಿಂದ ತಿಳಿಸುವುದೇನೆಂದರೆ ಮೇಲ್ಪಟ್ಟ ಕಂಪನಿಯನ್ನು ಸದಸ್ಯರ ಸ್ವಯಿಚ್ಛೆ ಪೂರ್ವ ಪರಿಸಮಾಪನ ಮಾಡಲಾಗಿದೆ.

"**ಕಂಪನಿ ಆಕ್ಟ್** ಪ್ರಕಾರ ಮೇಲೆ ತಿಳಿಸಿರುವ ಕಂಪನಿಯನ್ನು ಸ್ವಯಿಚ್ಛೆ ಪೂರ್ವ ಪರಿಸಮಾಪನ ಮಾಡಲಾಗಿದೆ"

ಸ್ಥಳ: ಬೆಂಗಳೂರು
ದಿನಾಂಕ: 1, ಸೆಪ್ಟೆಂಬರ್ 2003

ಕಂಪನಿಯ ಆದೇಶದ ಮೇಲೆ
**ಎಸ್. ಕೆ. ಕಾಂತರಾಜ್**, ಸಮಾಪಕ

**ಫಾರಂ ನಂ. 151 (ರೂಲ್ 315)**

**ಸದಸ್ಯರು ಸ್ವತಃ ಪರಸಮಾಪನಗೊಳಿಸುವುದು ಸಮಾಪಕನ ಅನುಸರಿಸಿ ನಿಯಾಮಕ ಸೂಚನ - 516**

| | |
|---|---|
| ಕಂಪನಿಯ ಹೆಸರು | ಆಂಗ್ಲಿಯನ್ ವಾಟರ್ ಇಂಟರ್ ನ್ಯಾಷಿನಲ್ (ಪ್ರೈ)ಲಿ. |
| ವ್ಯಾಪಾರ | ಪ್ಲಾಂಟ್ ಎಕ್ವಿಪ್‌ಮೆಂಟ್‌ನ ಡಿಜೈನ್, ಕಂಸ್ಟ್ರಕ್ಷನ್, ಮ್ಯಾನುಫಾಕ್ಚರ್, ಪರ್ಚೇಸ್, ಸೇಲ್ ಮೊದಲಾದವು. ಡಿಸ್ಟ್ರಿಬ್ಯೂಷನ್ ಸೇವೇಜ್ ಮತ್ತು ಪ್ರೀವೆಂಷನ್ ಆಫ್ ಎಯಿರ್, ವಾಟರ್ ಅಂಡ್ ಪೊಲ್ಯೂಷನ್ |
| ಕಛೇರಿಯ ವಿಳಾಸ | 105, 1ನೇ ಮೈನ್, 2ನೇ ಕ್ರಾಸ್, ಎಸ್. ಟಿ. ಬೆಡ್ ಲೇಔಟ್, ಕೋರಮಂಗಲ, ಬೆಂಗಳೂರು 560 - 034. |
| ಸಮಾಪಕನ ಹೆಸರು ಮತ್ತು ವಿಳಾಸ | ಎಸ್. ಕೆ. ಕಾಂತರಾಜ್ 160, "ಸಪ್ತಗಿರಿ ನಿಲಯ", 3ನೇ ಕ್ರಾಸ್, 4ನೇ ಬ್ಲಾಕ್, ಕೋರಮಂಗಲ, ಬೆಂಗಳೂರು 560 - 034 |
| ನಿಯಾಮಕ ದಿನಾಂಕ | 1, ಸೆಪ್ಟೆಂಬರ್ 2003 |
| ನೇಮಿಸಿದವರು | 1, ಸೆಪ್ಟೆಂಬರ್ 2003 ಸಭೆ ಸದಸ್ಯರು. |

ಸ್ಥಳ: ಬೆಂಗಳೂರು
ದಿನಾಂಕ: 1, ಸೆಪ್ಟೆಂಬರ್ 2003

**ಎಸ್. ಕೆ. ಕಾಂತರಾಜ್,**
ಸಮಾಪಕ

ಪಿ.ಡಿ. 88